ಪ್ರಕಟನೆ-೯೭

# ಈ ದಾರಿ - ಆ ದಾರಿ

ಕಾದಂಬರಿ



ಅ. ನ. ಕೃ

ಮುದ್ರಣ ಮತ್ತು ಪ್ರಕಾಶನ:
ಶಾರದಾ ಪ್ರಕಟನಾಲಯ
ಅರಳೇಪೇಟೆ :: ಬೆಂಗಳೂರು-೨

ಮೊದಲ ಮುದ್ರಣ :
ಮೇ ೧೯೬೦

ಮುಖಚಿತ್ರ :

ಜ್ಯೋತಿ ಪ್ರಜ್ವಲಿಸಿದ ನಂತರ
ಕಿಡಿಕಿರಣಗಳು ಉರಿಗಡರದಿರವು
ಸ್ವಾತಂತ್ರ್ಯ ಸಮರ ಜ್ಯೋತಿ
ಪ್ರಜ್ವಲಿಸಿದ ನಂತರ
ಪುಢಾರಿ ಸಮಾಜಕ್ಕಡರದಿರಸು.

ಮುಖಚಿತ್ರ ರಚನೆ :
ಎಸ್. ಎಲ್. ನಾರಾಯಣ್

ಬೆಲೆ :
ರೂ. ೧-೮೦



ರಕ್ಷಾಪತ್ರದ ಮುದ್ರಣ :
ಗೋಲ್ಡನ್ ಪ್ರಿಂಟಿಂಗ್ ವರ್ಕ್ಸ್
ಬೆಂಗಳೂರು-೨

# ಮುನ್ನುಡಿ

ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಮೇಲೆ ಹುಟ್ಟಿಕೊಂಡ ಅನೇಕ ಸಮಸ್ಯೆಗಳಲ್ಲಿ 'ಪುಢಾರಿ'ಗಳ ಸಮಸ್ಯೆಯೂ ಒಂದಾಗಿದೆ. ಈ ನೂತನ ವರ್ಗದ ಚಟುವಟಿಕೆಗಳಿಂದ ದೇಶದ ರಾಜಕೀಯ, ಸಾಮಾಜಿಕ ಜೀವನದ ಮೇಲೆ ಆಗಿರುವ ಪರಿಣಾಮವನ್ನು ಅನುಲಕ್ಷಿಸಬೇಕಾದ ಕಾಲ ಸನ್ನಿಹಿತವಾಗಿದೆ. **'ಈ ದಾರಿ – ಆ ದಾರಿ'** ಕಾದಂಬರಿ ಈ ಗುರಿಯನ್ನಿಟ್ಟುಕೊಂಡು ಮುನ್ನಡೆದಿದೆ.

ಲೋಕ ವ್ಯವಹಾರಕ್ಕೂ ಋಜುಜೀವನಕ್ಕೂ ಇರುವ ಅಂತರವನ್ನು ಕಡಿಮೆ ಮಾಡುವುದೇ ಸಂಸ್ಕೃತಿಯ ಗುರಿ ಎಂದು ನಾವು ಒಪ್ಪಿಕೊಂಡರೆ, ಇಂಥ ಪ್ರಯತ್ನ ನಮ್ಮ ದೇಶದಲ್ಲಿ ಹೇಗೆ ಸಾಗುತ್ತಿದೆಯೆಂಬುದನ್ನು ಗಮನಿಸಬೇಕು. ಈ ಕಾದಂಬರಿ ಓದುಗರ ಗಮನವನ್ನತ್ತ ಸೆಳೆಯುವ ಪ್ರಯತ್ನ ನಡೆಸಿದೆ.

'ಈ ದಾರಿ – ಆ ದಾರಿ' ಕಾದಂಬರಿಯನ್ನು ಪ್ರಕಟಿಸಿರುವ 'ಶಾರದಾ ಪ್ರಕಟನಾಲಯ'ದ ಗೆಳೆಯರು ಶ್ರೀ ಆರ್. ಬಸವರಾಜ್ ಮತ್ತು ಶ್ರೀ ಜಿ. ಬಸವರಾಜ್ ಅವರಿಗೆ ನನ್ನ ನೆನಕೆ ಸಲ್ಲಿಸುತ್ತೇನೆ.

೩೦-೪-೧೯೬೦

ಅ. ನ. ಕೃ

# ೧

ತಾವು ಆಡಿದ್ದೇ ಸರಿ ಎನ್ನುವ ಕಾಲ ಒಂದಿತ್ತು, ವೆಂಕಣ್ಣನವರಿಗೆ. ಅವರು ರೆವಿನ್ಯೂ ಹೆಡ್‌ಮುನಿಷಿಯಾಗಿದ್ದ ಕಾಲ ಅದು. ತರುವಾಯ ತಾವು ಆಡಿದ್ದು ಸರಿ ಇದ್ದರೂ ಇರಬಹುದು ಎನ್ನುವ ಕಾಲ ಆರಂಭವಾಯಿತು. ಅದು ಪಿಂಚಣಿ ಆದ ಹೊಸದು. ಸದ್ಯಕ್ಕೆ ತಾವು ಆಡುವುದು ಯಾವದೂ ಸರಿಯಿಲ್ಲ ಎನ್ನುವ ನಿರ್ಧಾರಕ್ಕೆ ಅವರು ಬಂದಿದ್ದರು

ವೆಂಕಣ್ಣನವರು ಈ ನಿರ್ಧಾರಕ್ಕೆ ಬರುವುದಕ್ಕೆ ಕಾರಣರಾಗಿದ್ದವರು ಅವರ ಸಹಧರ್ಮಿಣಿ ಅಂಬಮ್ಮನವರು.

ಅಂಬಮ್ಮನವರು ‘ಗಯ್ಯಾಳಿಗಳ’ ವರ್ಗಕ್ಕೆ ಸೇರದಿದ್ದರೂ ವಯಸ್ಸು, ಅನುಭವ, ತಾಪತ್ರಯ, ರೋಗರುಜಿನಗಳು ಅವರನ್ನು ಶೀಘ್ರ ಕೋಪಿಗಳನ್ನಾಗಿ ಮಾಡಿತ್ತು. ತಾವು ಆಡಿದ್ದೇ ಸರಿ ಎಂದು ಅಂಬಮ್ಮನವರು, ಛಲ ಹಿಡಿದು ಸಾಧಿಸಲು ಹೊರಟರೆ ಅವರೆದುರು ನಿಲ್ಲಲು ಯಾರಿಗೂ ಧೈರ್ಯವಾಗುತ್ತಿರಲಿಲ್ಲ.

ಹೆಂಡತಿ ಮುಖ ಕೆಂಪಗಾಗುವುದನ್ನು ಕಂಡ ಕೂಡಲೆ ವೆಂಕಣ್ಣನವರು ‘ಶುದ್ಧಬ್ರಹ್ಮಪರಾತ್ಪರ ರಾಮ್’ ಹೇಳಿಕೊಂಡು ಮೆಲ್ಲನೆ ಹೊರಗೆ ಜಾರುತ್ತಿದ್ದರು. ಗಂಡನ ‘ಪಲಾಯನ ವೃತ್ತಿ’ ಕಂಡು ಅಂಬಮ್ಮನವರು ಮತ್ತಷ್ಟು ಸಿಡಿಮಿಡಿಗೊಳ್ಳುತ್ತಿದ್ದರು.

ಗತ ತಲೆಮಾರಿನ ಜನರ ಜೀವನದಂತೆಯೇ ವೆಂಕಣ್ಣ ಅಂಬಮ್ಮನವರ ಜೀವನ ಆರಂಭವಾಗಿ ಬೆಳೆದಿತ್ತು. ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದ ಹನ್ನೊಂದು ವರ್ಷದ ವೆಂಕಣ್ಣನಿಗೆ, ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದ ಎಂಟು ವರ್ಷದ ಅಂಬಮ್ಮನನ್ನಿತ್ತು ಲಗ್ನವಾಗಿತ್ತು. ಈ ಮಕ್ಕಳಿಗೆ ಲಗ್ನವೂ ಒಂದು ಆಟವೇ ಆಗಿತ್ತು. ಹದಿನೆಂಟು ಹತ್ತೊಂಭತ್ತು ದಾಟುವುದರೊಳಗೆ ವೆಂಕಣ್ಣ ಸಂಸಾರ ತಾಪತ್ರಯಗಳಿಗೀಡಾಗಿ ಅಮಲ್ದಾರರ ಆಫೀಸಿನಲ್ಲಿ ಒಂದು ನೌಕರಿ ಹಿಡಿಯಬೇಕಾಯಿತು. ಹದಿನಾರು ವರ್ಷ ಪ್ರಾಯಕ್ಕೇ ಅಂಬಮ್ಮ ಗಂಡನ

ಮನೆ ಸೇರಿದುದಲ್ಲದೆ, ಸಂಸಾರದ ಸಮಸ್ತ ಜವಾಬ್ದಾರಿಯನ್ನೂ ನಿರ್ವಹಿಸ ಬೇಕಾಯಿತು.

ವೆಂಕಣ್ಣ, ಅಂಬಮ್ಮನಿಗೆ ಗಂಡ--ಹೆಂಡತಿ ಎನ್ನುವ ಕಲ್ಪನೆ ಬಂದುದು ಚೊಚ್ಚಿಲ ಮಗು ಸುಭದ್ರಾ ಹುಟ್ಟಿದ ಮೇಲೆ. ಆಗಲೂ ಅವರ ಪ್ರಣಯಾಭಿವ್ಯಕ್ತಿ ಅತಿ ಸೂಕ್ಷ್ಮವಾಗಿ, ಅತಿ ಮಾರ್ಮಿಕವಾಗಿಯೇ ನಡೆದಿತ್ತು. ಗಂಡನೆದುರಿಗೆ ನಿಂತು, ಮುಖಕ್ಕೆ ಮುಖ ಕೊಟ್ಟು ಮಾತನಾಡುವುದನ್ನು ಅಂಬಮ್ಮ ಅರಿಯರು. ವೆಂಕಣ್ಣನವರೂ ಹೆಂಡತಿಯನ್ನು ನೇರವಾಗಿ ಮಾತನಾಡಿಸುತ್ತಿರಲಿಲ್ಲ. ಮೂರನೆಯವರನ್ನು ಮಾತನಾಡಿಸುವಂತೆ ಮಾತನಾಡಿಸಿ ತಮ್ಮ ಅಭಿಪ್ರಾಯ ಹೊರಗೆಡುವುತ್ತಿದ್ದರು.

ಸುಭದ್ರನಿಗೆ ನಾಲ್ಕನೆಯ ವರ್ಷ ನಡೆಯುತ್ತಿರುವಾಗ ಅಂಬಮ್ಮ ಗಂಡು ಮಗುವೊಂದನ್ನು ಪ್ರಸವಿಸಿದರು.

ಸುಭದ್ರ ತಂದೆಯ ಕಣ್ಣುಗೊಂಬೆಯಾಗಿದ್ದಂತೆ ರಾಮಣ್ಣ ತಾಯಿಯ ಕಣ್ಣುಗೊಂಬೆಯಾದ

ವೆಂಕಣ್ಣನವರಿಗೆ ಅಲ್ಪಸ್ವಲ್ಪ ಜಮೀನು, ಒಂದು ಸಣ್ಣ ಎಲೆ ತೋಟವಿತ್ತು. ಸ್ವಯಾರ್ಜನೆ ಮತ್ತು ಸ್ವಪ್ರಯತ್ನದಿಂದ ಅವರು ಹಿರಿಯರ ಆಸ್ತಿಯನ್ನು ಚೆನ್ನಾಗಿ ರೂಢಿಸುತ್ತಿದ್ದುದಲ್ಲದೆ ಅದನ್ನು ಬೆಳಸುತ್ತಲೂ ಬಂದಿದ್ದರು. ತಾಲ್ಲೂಕು ಕಛೇರಿಯ ಖದೀಮರಾಗಿದ್ದ ವೆಂಕಣ್ಣನವರಿಗೆ ಆಸ್ತಿ ವಿಸ್ತರಿಸುವ ಕ್ರಮವನ್ನು ಯಾರೂ ಹೇಳಿಕೊಡಬೇಕಾಗಿರಲಿಲ್ಲ.

ಸೋಲೂರಿನಲ್ಲಿ ವೆಂಕಣ್ಣನವರ ಕೀರ್ತಿ ವಿಸ್ತರಿಸಿ ಅವರ ಸ್ಥಾನಮಾನಗಳನ್ನು ಭದ್ರಗೊಳಿಸುವ ಒಂದು ಸನ್ನಿವೇಶ ಒದಗಿತು.

ಸೋಲೂರಿನ ಜನ ಸ್ವಭಾವತಃ ಶಾಂತಿಪ್ರಿಯರು. ಒಣ ತರಲೆ ತಕರಾರುಗಳಿಗೆ ಅವರು ಹೋಗುತ್ತಿರಲಿಲ್ಲ. ಶಾನುಭೋಗ ವೆಂಕಟರಮಣಯ್ಯನವರೂ, ಪಟೇಲ ನಂಜೇಗೌಡನೂ ಊರಿನವರೇ ಆಗಿದ್ದುದರಿಂದ ಯಾವ ಬಗೆಯ ಘರ್ಷಣೆಗೂ ಅವಕಾಶ ಕೊಡುತ್ತಿರಲಿಲ್ಲ.

ಶಾನುಭೋಗ ಪಟೇಲರ ಅಧಿಕಾರವನ್ನು ನಿಕೃಷ್ಟವಾಗಿ ಕಾಣುತ್ತಿದ್ದವನು ಭರಮೇಗೌಡನೊಬ್ಬನೇ.

ರೈತರಲ್ಲಿ ಭರಮೇಗೌಡ ಬಲವಾದ ಕುಳ. ಸೋಲೂರಿಗೆ ಒಂದು ಮೈಲಿದೂರದಲ್ಲಿದ್ದ ಕೊಪ್ಪಲಿನಲ್ಲಿ ವಾಸಿಸುತ್ತಿದ್ದ ಭರಮೇಗೌಡ ಪಾಳೆಯಗಾರ ಪ್ರಭುತ್ವ ಸ್ಥಾಪಿಸಿ ನಿರಂಕುಶನಾಗಿದ್ದ. ಸೋಲೂರಿನ ಜನ ಅವನನ್ನು ಕಂಡರೆ

ಗಡಗಡ ನಡಗುತ್ತಿದ್ದುದಲ್ಲದೆ, ಸೋಬೂರಿಗೆ ಬರುತ್ತಿದ್ದ ಅಮಲ್ದಾರರು, ಇನ್ಸ್‌ಪೆಕ್ಟರು ಮೊದಲು ಅವನಿಗೆ ' ಮುಜರೆ ' ಸಲ್ಲಿಸಬೇಕಾಗಿತ್ತು.

ಭರಮೇಗೌಡನ ರೀತಿನೀತಿಗಳನ್ನು ಕಂಡು ಊರಿನ ಜನರು, ಅಧಿಕಾರಿಗಳು ಬೇಸತ್ತಿದ್ದರೂ, ಅವನ ಮೇಲೆ ಕೈಯೆತ್ತಲು ಸಾಧ್ಯವಾಗಿರಲಿಲ್ಲ. ಅಧಿಕಾರಿಗಳನೇಕರು ಭರಮೇಗೌಡನ ' ಶಾಕಾಯ ಲವಣಾಯ'ಕ್ಕೆ ಕೈಯೊಡ್ಡಿ ಅವನ ವಿಕ್ರೀತ ದಾಸರಾಗಿ, ಅವನ ಪ್ರಾಬಲ್ಯ ಬೆಳೆಯಲು ಕಾರಣರಾಗಿದ್ದರು.

ಭರಮೇಗೌಡನ ಮೇಲೆ ಸರ್ಕಾರಕ್ಕೆ ನೂರಾರು ದೂರುಗಳು ಮುಟ್ಟಿದ್ದವು. ಅವುಗಳ ತನಿಖೆ ಮಾಡಲು ಬರುತ್ತಿದ್ದ ಅಧಿಕಾರಿಗಳು ಬೆದರಿಕೆಗೆ ಈಡಾಗಿ, ಲೋಭಕ್ಕೆ ಪಕ್ಕಾಗಿ ಅವನು ನಿರಪರಾಧಿಯೆಂದು ಸಾರಿಬಿಡುತ್ತಿದ್ದರು !

ಕೊಪ್ಪಲಿಗೆ ಎರಡು ಮೂರು ಫರ್ಲಾಂಗ್ ದೂರದಲ್ಲಿದ್ದ ತನ್ನ ತೋಟದ ಮನೆಯಲ್ಲಿ ಭರಮೇಗೌಡ ಒಂದು ಜೂಜಿನ ಕಟ್ಟೆ ನಡೆಸುತ್ತಿದ್ದ. ಅದರ ಆಡಳಿತ, ರಕ್ಷಣೆಗಾಗಿ ನಿಯಮಿತರಾಗಿದ್ದ ಪತ್ತಿಪ್ಪತ್ತು ಕಟ್ಟಾಳುಗಳು ಭರಮೇಗೌಡನ ರಾಕ್ಷಸಕೃತ್ಯಗಳಿಗೆಲ್ಲಾ ಬೆಂಬಲವಿತ್ತು, ಅವನ ಪ್ರಾಬಲ್ಯ ಬೆಳೆಯಲು ಕಾರಣರಾಗಿದ್ದರು.

ಐಹಿಕ ಸುಖಜೀವನಕ್ಕೆ ಅತ್ಯವಶ್ಯಕವಾದ ಎಲ್ಲ ಅನುಕೂಲಗಳೂ ಭರಮೇಗೌಡನಿಗಿದ್ದರೂ ಅವನ ಸಂಸಾರಜೀವನ ಸುಖಕರವಾಗಿರಲಿಲ್ಲ. ಮೊದಲನೆಯ ಹೆಂಡತಿ ತಿಮ್ಮಿ ಮೃತಿಹೊಂದಲು ಗೌಡ ಎರಡನೆಯ ಮದುವೆ ಮಾಡಿಕೊಂಡ. ಎರಡನೆಯ ಹೆಂಡತಿ ಜವನಿಗೆ ಮಕ್ಕಳಾಗದಿರಲು ಗೌಡ, ಅವಳು ಜೀವಂತಳಾಗಿರುವಾಗಲೇ ಇನ್ನೊಂದು ಮದುವೆಮಾಡಿಕೊಂಡ. ಗೌಡನ ದೌರ್ಭಾಗ್ಯಕ್ಕೆ ಚೆನ್ನಿಗೂ ಮಕ್ಕಳಾಗಲಿಲ್ಲ.

ಚೆನ್ನಿ ಗೌಡನ ಮನೆ ಸೇರಿದ ಎರಡು ವರ್ಷಕ್ಕೆ ಒಂದು ದಿನ ಇದ್ದಕ್ಕಿದ್ದಂತೆ ಜವನಿ ಮೃತಪಟ್ಟಳು. ಬೆಳಗಾಗುವುದರೊಳಗಾಗಿ ಗೌಡ ಅವಳ ಕಳೇಬರವನ್ನು ಮಣ್ಣುಮಾಡಿಸಿ ದೊಡ್ಡಮಾರಿ ಬಡಕೊಂಡು ಜವನಿ ಸತ್ತಳು, ಎಂದು ಸುದ್ದಿ ಹಬ್ಬಿಸಿದ.

ಅವನು ಹುಟ್ಟಿಸಿದ ಸುದ್ದಿಯನ್ನು ಯಾರೂ ನಂಬದಿದ್ದರೂ, ನಿಜಸ್ಥಿತಿ ತಿಳಿಯುವ ಧೈರ್ಯಮಾಡಲಿಲ್ಲ.

ಜವನಿ ಸತ್ತಂದಿನಿಂದ ಚೆನ್ನಿಗೂ ಗೌಡನಿಗೂ ವೈಮನಸ್ಯ ಬೆಳೆಯಿತು. ' ಜವನಿಗಾದ ಗತಿಯೇ ತನಗೂ ಆಗಬಹುದು ' ಎಂದು ಚೆನ್ನಿ ಹೆದರಿದಳು.

ಒಂದು ದಿನ ರಾತ್ರಿ, ಅತ್ತಿತ್ತ ನೋಡುತ್ತ ಕಳ್ಳನಂತೆ ಬಂದ ಪಟೇಲ ಸಂಜೇಗೌಡನನ್ನು ಸ್ವಾಗತಿಸಿದ ವೆಂಕಣ್ಣನವರು.

"ಇದು ಯಾಕೆ ಇಷ್ಟು ಗಾಬರಿಯಾಗಿದ್ದೀ ನಂಜೇಗೌಡ" ಎಂದು ಕೇಳಿದರು.

ವೆಂಕಣ್ಣನವರ ಮನೆಯ ಹಜಾರದಲ್ಲಿ ಕುಳಿತು, ಅವರಿತ್ತ ಎಲೆಅಡಿಕೆಯನ್ನು ಸಾವಕಾಶವಾಗಿ ಹಾಕಿಕೊಳ್ಳುತ್ತಾ ಗೌಡ,

"ಈ ಕೊಂಪ್ಯಾಗ ಏಳೋರು ಕೇಳೋರು ಯಾರೂ ಇಲ್ವಾ ಬುದ್ಧಿ" ಎಂದ.

ವೆಂಕಣ್ಣನವರು ನಕ್ಕು,

"ಪಟೇಲ—ನೀನೇ ಈ ಮಾತು ಕೇಳುವುದು ಬಹಳ ಚೆನ್ನಾಗಿದೆ ಕಣಯ್ಯ. ಪಟೇಲ, ಶಾನುಭೋಗರು, ಅಮಲ್ದಾರರು, ಪೋಲೀಸ್ ಇನ್ಸ್‌ಪೆಕ್ಟರು ನೀವೆಲ್ಲಾ ಇದ್ದುಕೊಂಡು ಹೇಳೋರು, ಕೇಳೋರು ಇಲ್ಲವೆಂದರೇನು ?"

"ನಮ್ಮನ್ನೆಲ್ಲಾ ನುಂಗಿ ನೀರು ಕುಡಿದವ್ನಲ್ಲಾ ಬರಮೇಗೌಡ."

"ಭರಮೇಗೌಡನ ಎಂಜಲಿಗೆ ಎಲ್ಲರೂ ಆಸೆಪಟ್ಟರೆ ಇನ್ನೇನಾಗತ್ತೆ ಗೌಡ ?"

"ನಾನು ಆಸೆಪಟ್ಟಿವ್ನಾ.... ?"

"ನೀನಲ್ಲದೆ ಇರಬಹುದು–ಉಳಿದವರು ?"

"ನೀವು ಏಳೋದು ಸರಿ–ಅದ್ಕೆ ಏನ್ಮಾಡಬೇಕಂತೀರಿ ?"

"ಹಣೇಬರಹ ಅಂದುಕೊಂಡು ಅನುಭವಿಸಬೇಕು—ಭರಮೇಗೌಡ ಕಂದಾಯ ಎಲ್ಲಾ ಕೊಟ್ಟಿದ್ದಾನೆಯೋ ?"

"ಎಲ್ಲಿ ಬಂತು ಬುದ್ಧಿ–ಮೂರು ವರ್ಸದ್ದು ಬಾಕಿ—ಕೇಳಾಕೆ ಹ್ವಾದ್ರೆ ಮಚ್ಚು ತಗೊಂಡು ಬತ್ತಾನೆ. ಈ ವರ್ಸ ಬಾಕಿ ಸರ್ಯಾಗಿ ವಸೂಲ್ಮಾಡ್ಲಿಲ್ಲಾಂತ ಸರ್ಕಾರದವರು ನನ್ನದು, ಶ್ಯಾನುಭೋಗರದು ಪೋಟಿಗೆ ಅಣ ಇಡಿದು ಬುಟ್ಟವ್ರೆ."

"ಅಮಲ್ದಾರ್ರು ಗಟ್ಟಿಯಾದ ಹೊರತೂ ಏನೂ ಆಗೋದಿಲ್ಲ ನಂಜೇಗೌಡ."

"ಅಮಲ್ದಾರ್ರಿಗೆ ಏಳಿದ್ರೆ 'ಅವನ ಸಾವಾಸ ಬೇಡ' ಅಂತಾರೆ. ಇನಿಸ್ಪೆಟ್ರು ಭರಮೇಗೌಡನ ಜೂಜಿನ ಕಟ್ಟೇಲಿ ಬಿದ್ದು ಸಾಯಿತ್ತಾರೆ. ಇದೆಲ್ಲಾ ಅಳಾಗಿ ಓಗ್ಲಿ೦ದ್ರೆ ಇನ್ನೊಂದು ಇಪತ್ತು ಬಂದ್ಬೈತಲ್ಲಾ ಬುದ್ಧಿ."

"ಏನು ವಿಪತ್ತು ?"

"ನಿಮ್ಗೆ ಗೊತ್ತೇ ಇಲ್ವಾ ?"

"ಯಾವ ವಿಷಯ ?"

"ಏನೂಂತ ಏಳ್ಲಿ ಬುದ್ಧಿ–ನಂಗೆ ತಲೆ ತಗ್ಗಿಸೋ ಅಂಗಾಗೈತೆ !"

" ನೀನು ಹೇಳದಿದ್ದರೆ ನನಗೆ ಗೊತ್ತಾಗುವುದು ಹೇಗೆ ಗೌಡ."

" ಭರಮೇಗೌಡ ನನ್ನ ನಕ್ಕ ಒಂದು ಆಡಲ್ ಮಾಡವ್ನೆ—ನಮ್ಮ ಮನೇಗಳಲ್ಲಿ ಎಣ್ಣು ದೊಡ್ಡದಾದರೆ ಅದನ್ನು ಮೊದಲು ಭರಮೇಗೌಡಂಗೆ ಒಪ್ಪಿಸ್ಬೇಕು "

" ಈ ವಿಷಯ ನಾನು ಕೇಳಿದ್ದೆ-ನಿಜವೇ ಗೌಡ ?"

" ಲಾಗಾಯಿತ್ನಿಂದ ನಡೆದುಕೊಂಡು ಬಂದ್ಬೈತೆ ಬುದ್ಧಿ-ಮಾದೇಗೌಡ ಒಲ್ಲೆ ಎಂದದ್ದಕ್ಕೆ ಅವನ ಉಲ್ಲುಮೆದೆ, ಕಣಜ, ದನಕರ ಎಲ್ಲಾ ಸುಟ್ಟು ಓಯ್ತು. ಮಾದೇಗೌಡಂಗೆ ಆದದ್ನ ಕಂಡು ನಮ್ಜನ ಎದರ್ಕ್ಕೊಂಡು, ಭರಮೇಗೌಡ ಏಳ್ದಂಗೆ ಕೇಳ್ತಾ ಬಂದವ್ರೆ. ಮಾತಾಡಿದ್ರೆ, ಮಾನ ಓಗ್ತೈತೆ ಅಂದ್ಕೊಂಡು ಎಲ್ಲರೂ ಬಾಯಿಗೆ ಬೀಗ ಆಕಿಕೊಂಡವ್ರೆ ಬುದ್ಧಿ."

ಸಿಟ್ಟು ನಿಂಬಿಟ್ಟು ವೆಂಕಣ್ಣನವರು,

" ಭರಮೇಗೌಡನ ಜತೆಗೆ ನಿಮ್ಮ ಜನವೇ ಷಾಮೀಲಾದ ಮೇಲೆ, ಹೊರಗಿನವರು ನಾವು ಏನುಮಾಡುವುದಕ್ಕಾಗತ್ತೆ ಗೌಡ."

" ಬೀದೀಲಿ ಓಗೋ ಮಾರವ್ವ, ಈಗ ನನ್ನ ಮನೆಗೆ ಬಂದ್ಬೈತೆ ಬುದ್ಧಿ."

ವೆಂಕಣ್ಣನವರು ಗಾಬರಿಗೊಂಡು,

" ನಿನ್ನ ಮನೆಗೆ............?"

" ಔದ್ರಾ-ನರಸೀ ದೊಡ್ಡೋಳಾಗವ್ಳೆ-ಶಾಸ್ತ್ರಾನೂ ಮಾಡ್ದೆ ನಾವು ಮುಚ್ಚಿಟ್ಟಿದ್ದೀವಿ. ಭರಮೇಗೌಡಂಗೆ ಗೊತ್ತಾದ್ರೆ ಪಂಚಾತ್ಕೆ ಆಗ್ತೈತೆ. ಅಂಗೇನಾರಾ ಸಂದರ್ಭ ಬಂದ್ರೆ ನರಸೀಗೆ ಇಸ ಕೊಟ್ಟುಬುಡೋವಾ ಅಂದ್ಕೊಂಡಿವ್ನಿ ಬುದ್ಧಿ "

ಎಂದು ಕಳಕಳಿಯಿಂದ ನುಡಿದ ನಂಜೇಗೌಡನ ಕಣ್ಣುಗಳಿಂದ ಹನಿಗಳುದುರಿದವು.

ಗೌಡನಿಗೆ ಬಂದೊದಗಿದ್ದ ವಿಪತ್ತಿಗಾಗಿ ವೆಂಕಣ್ಣನವರೂ ಮನ್ಸಿನಲ್ಲಿ ಮರುಗಿದರು.

ನಂಜೇಗೌಡನ ಮಗಳು ನರಸಿಯ ಬಗ್ಗೆ ವೆಂಕಣ್ಣನವರು, ಅಂಬಮ್ಮ ಇಬ್ಬರೂ ಅಭಿಮಾನ ತಳೆದಿದ್ದರು. ಸುಭದ್ರೆಯ ಓರಗೆಯವಳಾದ ನರಸಿ ಹೆಚ್ಚು ಕಡಿಮೆ ವೆಂಕಣ್ಣನವರ ಮನೆಯಲ್ಲಿಯೇ ಬೆಳೆದಿದ್ದಳು.

ತಮ್ಮ ಕರುಳಿಗಾದ ಆಘಾತವೇದನೆಯನ್ನು ಸಹಿಸಿಕೊಂಡ ವೆಂಕಣ್ಣನವರು, ಯೋಚಿಸಿ,

" ಒಂದು ಕೆಲಸ ಮಾಡ್ತೀಯಾ ನಂಜೇಗೌಡ " ಎಂದರು.

" ಅಪ್ಪಣೆಯಾಗಲಿ ಬುದ್ಧಿ."

"ಬೆಳಿಗ್ಗೆ ನೀನು, ಯಾರಿಗೂ ತಿಳಿಸದೆ ಬೆಂಗಳೂರಿಗೆ ಹೋಗು. ನನ್ನ ಸ್ನೇಹಿತರು ಸುಬ್ಬರಾಯಪ್ಪನವರು ಅಲ್ಲಿ ಎ. ಎಸ್. ಪಿ. (A. S. P.) ಆಗಿದ್ದಾರೆ. ಅವರಿಗೊಂದು ಕಾಗದ ಬರೆದು ಕೊಡುತ್ತೇನೆ. ಅದನ್ನು ಕೊಟ್ಟು ಸೋಲೂರು ಸಮಾಚಾರವನ್ನೆಲ್ಲಾ ತಿಳಿಸು ಅವರು ಇದಕ್ಕೇನಾದರೂ ಪರಿಹಾರ ಹುಡುಕುತ್ತಾರೆ."

"ನರಸೀ ಗತಿ ?"

"ನರಸೀ ವಿಷಯ ಯೋಚನೆ ಮಾಡಬೇಡ. ಅವಳನ್ನು ಕರೆದುಕೊಂಡು ಬಂದು ಇಲ್ಲಿ ಬಿಟ್ಟು ಹೋಗು."

"ನನಗೋಸ್ಕರ ನೀವು ದುರ್ಜನವಾಗಬೇಕಲ್ಲಾ ಬುದ್ಧಿ."

"ನಮ್ಮ ಊರಿನ ಹೆಣ್ಣು ಮಕ್ಕಳ ಮರ್ಯಾದೆ ನಾವು ಕಾಪಾಡದಿದ್ದರೆ ನಾವಿದ್ದೇನು ಸಾರ್ಥಕ ಗೌಡ. ನೀನು ಧೈರ್ಯವಾಗಿ ಬೆಂಗಳೂರಿಗೆ ಹೋಗಿ ಬಾ–ನೀನು ಬರುವವರೆಗೆ ನರಸಿಗೆ ಯಾವ ಅಪಾಯವೂ ಆಗದಂತೆ ನಾನು ನೋಡಿಕೊಳ್ಳುತ್ತೇನೆ"

ಎಂದು ಧೈರ್ಯ ಹೇಳಿದರು.

## ೨

ಪೋಲೀಸ್ ಅಸಿಸ್ಟೆಂಟ್ ಸೂಪರಿಂಟೆಂಡೆಂಟರಾಗಿದ್ದ ಸುಬ್ಬರಾಯಪ್ಪ ನವರು, ಜೀವನವನ್ನು ಕೆಳಹಂತದಿಂದಲೇ ಆರಂಭಿಸಿದ್ದರು. ಸಬ್ ಇನ್ಸ್‌ಪೆಕ್ಟರಾಗಿ ಪೋಲೀಸ್ ಖಾತೆ ಸೇರಿದ ಸುಬ್ಬರಾಯಪ್ಪನವರು ತಮ್ಮ ದಕ್ಷತೆ, ನಿಷ್ಠೆ, ಸತ್ಯ ಪ್ರಿಯತೆಗಳಿಂದ ಅಸಿಸ್ಟೆಂಟ್ ಸೂಪರಿಂಟೆಂಡೆಂಟ್ ಪದವಿಗೇರಿದ್ದರು.

ಪೋಲೀಸ್ ಖಾತೆಯಲ್ಲಿ ಸುಬ್ಬರಾಯಪ್ಪನವರ ನ್ಯಾಯನಿಷ್ಠುರವಾದವೇ ಅವರಿಗೆ ಹಲವು ಪ್ರತಿರೋಧಿಗಳನ್ನು ನಿರ್ಮಾಣಮಾಡಿತ್ತು. 'ಈ ಮನುಷ್ಯ ತಾನೂ ತಿನ್ನ–ಇತರರು ತಿನ್ನುವುದಕ್ಕೂ ಬಿಡ' ಎನ್ನುವ ಅಸಮಾಧಾನ ಹಲವ ರಲ್ಲಿ ಹಬ್ಬಿತ್ತು. ಸುಬ್ಬರಾಯಪ್ಪ ಯಾವದನ್ನೂ ಮನಸ್ಸಿಗೆ ಹಾಕಿಕೊಳ್ಳುತ್ತಿರಲಿಲ್ಲ. ಮೇಲಧಿಕಾರಿಗಳು ತಪ್ಪು ವರ್ತಿಸಿದರೆ ಅವರನ್ನು ಖಂಡಿಸುವುದಕ್ಕೆ ಹಿಂಜರಿ ಯುತ್ತಿರಲಿಲ್ಲ. ಕೆಳಗಿನ ನೌಕರರು ತಪ್ಪು ವರ್ತಿಸಿದರೆ ಅವರನ್ನು 'ಛೀಮಾರಿ' ಮಾಡುತ್ತಿದ್ದರಲ್ಲದೆ, ಅವರ ಹೊಟ್ಟೆಯ ಮೇಲೆ ಹೊಡೆಯುತ್ತಿರಲಿಲ್ಲ.

ಪೋಲೀಸ್ ಖಾತೆಯ ಯಾವ ಕಲ್ಯಾಣಗುಣಗಳನ್ನೂ ಅವಲಂಬಿಸದಿದ್ದ ಸುಬ್ಬರಾಯಪ್ಪನವರು ಆ ಖಾತೆಗಿಂತಲೂ, ಯಾವದಾದರೊಂದು ಮಠಾಧಿಕಾರಕ್ಕೆ ಹೆಚ್ಚು ಅರ್ಹರಾಗಿದ್ದರು.

ಕಛೇರಿ ಬಿಟ್ಟರೆ ಮನೆ; ಮನೆ ಬಿಟ್ಟರೆ ಕಛೇರಿ, ಎರಡನ್ನೇ ಸುಬ್ಬ ರಾಯಪ್ಪನವರು ಕಂಡಿದ್ದುದು. ಪರಮ ಭಗವದ್ಭಕ್ತರಾಗಿದ್ದ ಸುಬ್ಬರಾಯಪ್ಪ, ತಮ್ಮ ವಿರಾಮಕಾಲವನ್ನೆಲ್ಲಾ ಪೂಜೆ, ಪಾರಾಯಣ, ಧ್ಯಾನಗಳಲ್ಲಿ ಕಳೆ ಯುತ್ತಿದ್ದರು.

ಭಾ ನು ವಾ ರ ರಜವಿರುತ್ತಿದ್ದುದರಿಂದ ಸುಬ್ಬರಾಯಪ್ಪನವರ ಪೂಜೆ ಅವಿಚ್ಛಿನ್ನವಾಗಿ ಸಾಗುತ್ತಿತ್ತು.

ಒಂದು ಭಾನುವಾರ ಸುಬ್ಬರಾಯಪ್ಪನವರು ಪೂಜೆಗೆ ಕುಳಿತಿದ್ದರು. ಅವರ ಸಹಧರ್ಮಿಣಿ ನಾಗರತ್ನಮ್ಮ ಒಳಗೆ ಬಂದು,

" ಸೋಲೂರಿನ ವೆಂಕಣ್ಣನವರು ಕಾಗದ ಬರೆದು ಆಳಿನ ಸಂಗಡ ಕಳಿಸಿದ್ದಾರೆ " ಎಂದರು

" ಏನಂತೆ ! ವಿಚಾರಿಸು."

" ನಿಮಗೇ ತಿಳಿಸಬೇಕೆಂದು ಆಳು ಹೇಳಿದ."

" ಕುಳಿತುಕೋ ಎಂದು ಹೇಳು ಪೂಜೆ ಮುಗಿಸಿಕೊಂಡು ಬರುತ್ತೇನೆ."

ಸುಬ್ಬರಾಯಪ್ಪನವರ ಪೂಜೆ ಮುಗಿಯಲು ಅಪರಾಹ್ನವಾಯಿತು. ತೀರ್ಥ ಸ್ವೀಕರಿಸಿ, ಉಟ್ಟಿದ್ದ ಮಡಿಯಲ್ಲೇ ಹೊರಗೆ ಬಂದ ಸುಬ್ಬರಾಯಪ್ಪನವರು ಪಟೇಲ ನಂಜೇಗೌಡನನ್ನು ಕಂಡು,

" ಏನಪ್ಪ, ಏನು ಬಂದಿದ್ದೆ " ಎಂದರು.

ಸಾಹೇಬರಿಗೆ ಅಡ್ಡಬಿದ್ದ ನಂಜೇಗೌಡ, ವೆಂಕಣ್ಣನವರ ಕಾಗದವನ್ನು ಅವರ ಕೈಗಿತ್ತ. ಸುಬ್ಬರಾಯಪ್ಪನವರು ಕಾಗದವನ್ನೋದಿಕೊಂಡು,

" ಭರಮೇಗೌಡನ ವಿಷಯ ನಮಗೆ ದೂರುಗಳು ಬರುತ್ತಿವೆ. ಸ್ಥಳೀಯ ಅಧಿಕಾರಿಗಳು ಏನೂ ಮಾಡಿಲ್ಲವೇ ?"

" ಅವರೂ ಭರಮೇಗೌಡನ ಜತೆ ಷಾಮೀಲಾಗಿದ್ದಾರೆ ಬುದ್ಧಿ— ಭರಮೇಗೌಡನ್ನ ತಾವು ಮಟ್ಟ ಹಾಕ್ದಿದ್ರೆ ನಾವು ಯಾರೂ ಬದುಕೋಕೆ ಆಗಾಕಿಲ್ಲ."

" ಅವನು ಏನು ಮಾಡ್ತಾನೆ–ಎಲ್ಲಾ ವಿವರವಾಗಿ ಹೇಳು."

ನಂಜೇಗೌಡ ನಿರೂಪಿಸಿದ ಭರಮೇಗೌಡನ ವೃತ್ತಾಂತ ಕೇಳಿದ ಸುಬ್ಬರಾಯಪ್ಪನವರು ಚಕಿತರಾಗಿ,

" ಏನು–ಚಿಕ್ಕಪುಟ್ಟ ಹೆಣ್ಣುಮಕ್ಕಳ ಮರ್ಯಾದೆ ಕೆಡಿಸುತ್ತಿದ್ದಾನೆಯೇ !"

" ನಾನು ಸುಳ್ಳು ಹೇಳಾಕಿಲ್ಲ ಬುದ್ಧಿ. ತಾವೇ, ಸೋಲೂರಿಗೆ ಬಂದು ವಿಚಾರಿಸ್ಬೋದು. ಇವನ ಪುಂಡಾಟ ನಿಲ್ಲಿದ್ರೆ, ಊರೋರೆಲ್ಲಾ ಒಂದಾಗಿ ಅವನ ಅಟ್ಟೀಗೆ ಬೆಂಕಿ ಮಡಗ್ಬಿಡ್ತಾರೆ. ಜನ ರೋಸಿ ಓಗ್ಬೈತೆ–ಇನಿಸ್ಪೇಟ್ರು, ಅಮಲ್ದಾರ್ರು ನಮ್ಮ ಪಿರ್‍ಯಾದೀನ ಕಿವೀಮ್ಯಾಕ್ಕೆ ಆಕ್ಕೊಳ್ಳಾಕಿಲ್ಲ."

" ಭರಮೇಗೌಡ ಮಹಾಪ್ರಬಲನಾಗಿರುವ ಹಾಗೆ ಕಾಣುತ್ತದೆ ಅಲ್ಲದೆ ಅವನಿಗೆ ಅಧಿಕಾರಿಗಳ ಬೆಂಬಲವೂ ಇದೆ. ನಾವು ಬಹಳ ಎಚ್ಚರದಿಂದ ಕೆಲಸ ಮಾಡ್ಬೇಕು ನಂಜೇಗೌಡ. ನೀನು ಇಲ್ಲೇ ಊಟ ಮಾಡಿಕೊಂಡು ಊರಿಗೆ ಹೋಗಿಬಿಡು–ಬೆಂಗಳೂರಿಗೆ ಬಂದು ನನ್ನ ಕಂಡ ಸಂಗತಿ ಯಾರಲ್ಲಿಯೂ ಬಾಯಿ ಬಿಡಬೇಡ. ಈ ವಿಷಯದಲ್ಲಿ ಏನು ಮಾಡಬೇಕೋ ಅದನ್ನು ನಾನು ಮಾಡುತ್ತೇನೆಂದು ವೆಂಕಣ್ಣನವರಿಗೆ ತಿಳಿಸು."

“ ಆಗ್ಬೈದು ನನ್ನೊಡೆಯಾ ”

ಎಂದು ನಂಜೇಗೌಡ ಕೈಮುಗಿದ.

ನಂಜೇಗೌಡನಿಗೆ ಮನೆಯಲ್ಲಿ ಊಟ ಹಾಕಿಸಿ, ಅವನಿಗೆ ಬಸ್ ಫೇರ್ ಕೊಟ್ಟು ಕಳಿಸಿದ ಮೇಲೆ ಸುಬ್ಬರಾಯಪ್ಪನವರು ಕೈಗೆ ಫೋನ್ ಎತ್ತಿಕೊಂಡು, ಡಯಲ್ (Dail) ಮಾಡಿದರು ಅತ್ತಣಿಂದ ಮರುದನಿ ಬಂದಿತು,

“ ಯಾರು ಮಾತಾಡುವುದು ?” ಎಂದು

“ ನಾನು ಎ. ಎಸ್. ಪಿ ಸುಬ್ಬರಾಯಪ್ಪ. ಇನ್ಸ್‌ಪೆಕ್ಟರ್ ಮೈಲಾರಯ್ಯ ಇದ್ದಾರೇನು ?”

ಇನ್ಸ್‌ಪೆಕ್ಟರು ಫೋನಿಗೇ ಒಂದು ಸೆಲ್ಯೂಟ್ (Salute) ಹಾಕಿ,

“ ನಾನೇ ಸಾರ್ ಮಾತಾಡ್ತಿರೋದು–ಮೈಲಾರಯ್ಯ.”

“ ಇದೇನ್ರೀ. ಭಾನುವಾರವಾದರೂ ಮನೆಗೆ ಹೋಗಿಲ್ಲವೇ ?”

“ ಎಲ್ಲಿ ಹೋಗಲಿ ಸಾರ್ ಮೆಜೆಸ್ಟಿಕ್ ಬಸ್ ಸ್ಟ್ಯಾಂಡಿನಲ್ಲಿ ಪಿಕ್ ಪಾಕೆಟ್ಸ್ (Pick-Pockets) ಗುಂಪೊಂದು ಸಿಕ್ಕಿದೆ. ಅವರ ತನಿಖೆ ಮಾಡ್ತಾ ಇದ್ದೆ.”

“ ಮಾಲು ಏನಾದರೂ ಸಿಕ್ಕಿತೇ ?”

“ ಎರಡು ಪರ್ಸ್, ನಾಲ್ಕು ಪಾರ್ಕರ್ ಪೆನ್, ಎರಡು ಗಡಿಯಾರ ಸಿಕ್ಕಿದೆ ಸಾರ್.”

“ ಯಾವೂರಿನವರು ಕೇಡಿಗಳು ?”

“ ಚಿತ್ತೂರಿನವರಂತೆ !”

“ Good Work Mylariah ! ಮನೆಗೆ ಹೋಗಿ ಊಟ ಮಾಡಿಕೊಂಡು ಇಲ್ಲಿಗೆ ಸ್ವಲ್ಪ ಬರ್ತೀರಾ ?”

“ ನಾಕ್ಕೆಲ್ಲ ಬರಲೇ ಸಾರ್ ?”

“ ಬನ್ನಿ–ಊಟ ಮುಗಿಸಿಕೊಂಡು ಬನ್ನಿ–ಏನೂ ಅವಸರವಿಲ್ಲ.”

“ ತಾವು ಮನೆಯಲ್ಲೇ ಇರ್ತೀರಾ ಸಾರ್.”

“ ಇರ್ತೀನಿ–ನಿಮಗಾಗಿ ಕಾಯುತ್ತಿರುತ್ತೇನೆ.”

“ ನಾಲ್ಕಕ್ಕೆ ಸರಿಯಾಗಿ ಬರ್ತೀನಿ ಸಾರ್”

ಎಂದು ಮೈಲಾರಯ್ಯ ನುಡಿದ.

ಸುಬ್ಬರಾಯಪ್ಪನವರು ಅರ್ಧ ಗಂಟೆ ಮಲಗಿ, ಮೇಲಕ್ಕೆದ್ದು ‘ ಭಾರತ ’ ಓದುತ್ತಾ ಕುಳಿತಿದ್ದರು.

ನಾಲ್ಕು ಹೊಡೆಯಲು ಒಳಗೆ ಬಂದ ಮೈಲಾರಯ್ಯ ಸಾಹೇಬರಿಗೆ ಸೆಲ್ಯೂಟ್ ಮಾಡಿದ.

ಸುಬ್ಬರಾಯಪ್ಪನವರು ಇನ್ಸ್‌ಪೆಕ್ಟರನ್ನು ಕೂಡ ಹೇಳಿ, ಕಾಫಿ ತರಿಸಿದರು.

ಕಾಫಿ ಸೇವನೆಯಾದ ಮೇಲೆ ಸುಬ್ಬರಾಯಪ್ಪನವರು,

" ಸೋಲೂರಿನ ವಿಷಯ ನಿಮಗೇನಾದರೂ ಗೊತ್ತೇ ಮೈಲಾರಯ್ಯ ?" ಎಂದು ಕೇಳಿದರು.

" ಸ್ವಲ್ಪ ಗೊತ್ತಿದೆ ಸಾರ್. ಅಲ್ಲಿ ಒಬ್ಬ ಪುಂಡ ಭರಮೇಗೌಡ ಸೇರಿ ಕೊಂಡು ಊರಿನಲ್ಲಿ ವಿಪರೀತ ಹಾವಳಿ ಮಾಡ್ತಾಇದ್ದಾನಂತೆ !"

" ಭರಮೇಗೌಡನ ವಿಷಯ ಕೇಳುವುದಕ್ಕೇ ನಾನು ನಿಮ್ಮನ್ನು ಬರ ಮಾಡಿದ್ದು–ನನ್ನ ಸ್ನೇಹಿತರು ಹೆಡ್ ಮುನಿಷಿ ವೆಂಕಣ್ಣನವರು ಒಂದು ಕಾಗದ ಬರೆದು ಕಳಿಸಿದ್ದಾರೆ. ಊರಿನ ಸಣ್ಣ ಪುಟ್ಟ ಹೆಣ್ಣು ಮಕ್ಕಳನ್ನೆಲ್ಲಾ ಈ ಭರಮೇಗೌಡ ಕೆಡಿಸುತ್ತಿದ್ದಾನಂತೆ !"

" ಆ ವಿಷಯ ನಾನೂ ಕೇಳಿದ್ದೆ ಸಾರ್–ಅಧಿಕಾರಿಗಳೇ ಭರಮೇಗೌಡನ ಬುಟ್ಟೀಗೆ ಬಿದ್ದರೆ ನಾವು ಏನು ಮಾಡುವುದಕ್ಕಾಗುತ್ತದೆ ?"

" ಅದನ್ನು ನಿಧಾನವಾಗಿ ಯೋಚಿಸೋಣ–ನೀವು ಒಂದು ಕೆಲಸ ಮಾಡಿ."

" ಅಪ್ಪಣೆಯಾಗಲಿ."

" ನಾಳೆ ಸೋಲೂರು ಫೈಲ್ಸ್ ನೋಡಿ, ಭರಮೇಗೌಡನ ಮೇಲೆ ಬಂದಿರುವ ಅರ್ಜಿಗಳ ವಿಷಯ ತಿಳಿದುಕೊಳ್ಳಿ."

" ಆಗಬಹುದು."

" ನಾಡಿದ್ದೋ ಆಚೆನಾಡಿದ್ದೋ ನೀವು ಗುಪ್ತವಾಗಿ ಸೋಲೂರಿಗೆ ಹೋಗಿ ಇನ್‌ವೆಸ್ಟಿಗೇಷನ್ (investigation) ಮಾಡಿಕೊಂಡು ಬಂದು, ನನಗೆ ರಿಪೋರ್ಟ್ (Report) ಮಾಡಿ."

" ಸೋಲೂರು ಇನ್ಸ್‌ಪೆಕ್ಟರಿಗೆ ತಿಳಿದರೆ ಅವರು ಸುಮ್ಮನಿರು ತ್ತಾರೆಯೇ ?"

" ಅವರಿಗೆ ತಿಳಿಯದ ಹಾಗೆ ಈ ಕೆಲಸ ನೀವು ಸಾಧಿಸಬೇಕು ಈಗ ಸೋಲೂರಿನ ಇನ್ಸ್‌ಪೆಕ್ಟರ್ ಯಾರು ?"

" ಸಂಜೀವಪ್ಪ."

" ತೀರ್ಥಹಳ್ಳಿಯಲ್ಲಿದ್ದನಲ್ಲಾ ಅವನೇನ್ರೀ ?"

" ಹೌದು ಸಾರ್."

"ಸರಿ ಸರಿ! ಅವನಿದ್ದ ಊದು ಹೊಲಗೇರಿಯಾಗೋದರಲ್ಲಿ ಏನು ಆಶ್ಚರ್ಯ!—ನೀವು ಇನ್‌ವೆಸ್ಟಿಗೇಷನ್ ಮುಗಿಸೋದು ಅಷ್ಟೇ ಅಲ್ಲ ಮೈಲಾರಯ್ಯ—ಈ ಕೇಸ್ ಹ್ಯಾಂಡಲ್ (handle) ಮಾಡಬೇಕು. ಒಬ್ಬ ಭರಮೇಗೌಡ ಇಡೀ ಸರ್ಕಾರ ಹೆದರಿಸಿಕೊಳ್ಳುವುದು–ನಿರ್ಭಯವಾಗಿ ಅತ್ಯಾಚಾರ ಮಾಡುವುದು ನಾಚಿಗೆಗೇಡು. ಇದನ್ನು ಮಟ್ಟ ಹಾಕದಿದ್ದರೆ ನಾವು ಪೋಲೀಸ್ ಕೆಲಸಕ್ಕೆ ರಾಜೀನಾಮೆ ಕೊಡುವುದು ಒಳ್ಳೆಯದು."

"ತಾವು ಯೋಚನೆ ಮಾಡಬೇಡಿ ಸಾರ್. ಈ ಕೇಸ್ ನಾನು ನೋಡಿಕೊಳ್ಳುತ್ತೇನೆ"

ಎಂದು ಮೈಲಾರಯ್ಯ ಆಶ್ವಾಸನವಿತ್ತ.

೩

ಬೇದಿರ್ಸಿನಲ್ಲಿ ಸೋಲೂರಿಗೆ ಬಂದ ಮೈಲಾರಯ್ಯನನ್ನು ವೆಂಕಣ್ಣನವರು ಹಾರ್ದಿಕವಾಗಿ ಸ್ವಾಗತಿಸಿದರು.

ತನ್ನ ಆಗಮನ, ವಿಷಯ ಸಂಗ್ರಹಣ, ಇತರ ಚಟುವಟಿಕೆಗಳೆಲ್ಲಾ ಅತ್ಯಂತ ಗೋಪ್ಯವಾಗಿರುವುದು ಅಗತ್ಯವೆಂದು ಮೈಲಾರಯ್ಯ ಒತ್ತಿ ಹೇಳಿದ.

ಮೈಲಾರಯ್ಯ ತಮ್ಮ ಸೋದರ ಸಂಬಂಧವೆಂದು ವೆಂಕಣ್ಣನವರು ಪರಿಚಯಸ್ಥರಿಗೆ ತಿಳಿಸಿದರು.

ಪಟೇಲ ನಂಜೇಗೌಡ ಸೊಂಟ ಕಟ್ಟಿಕೊಂಡು ಮೈಲಾರಯ್ಯನ ಸೇವೆಗೆ ಸಿದ್ಧನಾದ.

ಒಂದು ರಾತ್ರಿ ನಂಜೇಗೌಡನೊಂದಿಗೆ ಹೊರಟ ಮೈಲಾರಯ್ಯ ಭರಮೇ ಗೌಡನ ಮನೆ, ಅವನ ತೋಟಗಳನ್ನು ಪರಿಶೀಲಿಸಿ, ಒಳಗೆ ನಡೆಯುತ್ತಿದ್ದ ಜೂಜಾಟದ ಕಾರ್ಯ ಕಲಾಪ, ಕಳ್ಳಭಟ್ಟಿ ಸಾರಾಯಿಯ ಬಿಸಿಯೋಗವನ್ನು ಕಣ್ಣಾರೆ ಕಂಡ.

ಭರಮೇಗೌಡನ ಬಗ್ಗೆ ಸಾಕಷ್ಟು ವಿಷಯ ಸಂಗ್ರಹಿಸಿಕೊಂಡ ಮೇಲೆ ಮೈಲಾರಯ್ಯ,

"ನಂಜೇಗೌಡ, ಈ ಊರಿನಲ್ಲಿ ಭರಮೇಗೌಡನ ಪಕ್ಷದಲ್ಲಿರುವವರು ಯಾರು ?"

ಎಂದು ಕೇಳಿದ.

"ಅವನ ತಾಬೇದಾಗಿರೋರು–ಅಧಿಕಾರಿಗಳು- ಅವನ ಆಳು ಕಾಳುಗಳು ಊರಿಗೆ ಊರೇ ಅವನಿಗೆ ಇರೋದವಾಗ್ಯೆತೆ ಬುದ್ದಿ."

"ಭರಮೇಗೌಡನ ಮೇಲೆ ಹೆಚ್ಚಾಗಿ ವೈರ ಸಾಧಿಸುತ್ತಿರುವವರು ಯಾರು ?"

"ಭರಮೇಗೌಡನ ಹೆಡ್ತಿ ಚೆನ್ನಿ. ಈಡಿಗರ ಪಾಪಣ್ಣ."

"ಚೆನ್ನಿಗೇಕೆ ಅವನ ಮೇಲೆ ದ್ವೇಷ."

"ಎಲ್ಡನೇ ಹೆಡ್ತಿ ಜವನಿ ಒದುಕಿರುವಾಗ್ಲೇ ಭರಮೇಗೌಡ ಚೆನ್ನೀನ

ಉಡ್ಕೀ ಮಾಡ್ಕೊಂಡು ಅಲ್ಲಿಗೆ ಕರ್ಕೊಂಡು ಬಂದ. ಮೊದಲು ಮೊದಲ ಜವನಿ, ಚೆನ್ನಿ ಬಡಿದಾಡ್ತಿದ್ರು. ಭರಮೇಗೌಡ್ನ ಪಯಿಪಾಟು ತಿಳಿದ ಮ್ಯಾಕೆ ಇಬ್ಬರೂ ಒಂದಾದ್ರು. ಭರಮೇಗೌಡ ಇಬ್ಬರನ್ನೂ ಗೋಳು ಉಯ್ಕೋತಿದ್ರೂ, ಚೆನ್ನಿ ಮ್ಯಾಕೆ ಒಸಿ ಒಸಿ ಪಿರೀತಿ ಮಡಗಿದ್ದ. ಆ ಮಾತ್ಗೆ ಅವನ್ಗೂ ಜವನೀಗೂ ಮಾತು ನಡೀತು. ಒಂದೀಸ ಭರಮೇಗೌಡ ದೊಣ್ಣೆ ತಕ್ಕೊಂಡು ಜವನಿ ಬುಲ್ಡೀಗೆ ಬಿಸ್ನೀರು ಕಾಸಿದ. ಅವಳು ಗೊಟಕ್ಕಂದಳು."

"ಸತ್ತ್ಳೇ?"

"ಔದು ನನ್ನೊಡೆಯಾ?"

"ಇದು ಬಯಲಿಗೆ ಬರಲಿಲ್ಲವೇ?"

"ಎಂಗೆ ಬತ್ತೈತೆ. ಇನಿಸ್ಪೆಕ್ಟ್ರು ಸಂಜೀವಪ್ನೋರು ಭರಮೇಗೌಡ ನ್ಯಾಸ್ತ್ರರಾಗಿರೋವಾಗ!"

"ಚೆನ್ನಿಗೂ ಭರಮೇಗೌಡನಿಗೂ ಚೆನ್ನಾಗಿಲ್ಲಾ ಎಂದೆಯಲ್ಲಾ ಏಕೆ?"

"ಒಂದ್ಕಾಲಕ್ಕೆ ಭರಮೇಗೌಡನಿಗೂ ಈಡಿಗರ ಪಾಪಣ್ಣಂಗೂ ಬಲೇ ಬಲೇ ದೋಸ್ತಿ ನನ್ನೊಡೆಯಾ. ಇಬ್ಬರೂ ಒಂದೇ ಮೊಗೇಲಿ ಕಳ್ಳು ಕುಡೀತಿದ್ರು. ಒಬ್ಬನ ಮನೇಲಿ ಬಾಡು ಮಾಡಿದ್ರೆ ಇನ್ನೊಬ್ಬನ್ನ ಬಿಟ್ಟು ತಿನ್ತಾ ಇರ್‍ಲಿಲ್ಲಾ–ಇಬ್ಬರೂ ಒಂದೇ ಮನೆಂಪುವರ ಹಂಗಿದ್ರು."

"ಆಮೇಲೆ ಏನಾಯಿತು?"

"ಪಾಪಣ್ಣ ಗುಟ್ಟಾಗಿ ಚೆನ್ನಿ ದೋಸ್ತಿ ಬೆಳಸಿದ. ಅವರ್‍ದು ಕಥೆ ಸುಮಾರು ದೀಸ ನಡೀತೂನ್ನಿ. ಭರಮೇಗೌಡ ಅನುಮಾಣ ಪಡ್ನೇ ಇಲ್ಲ. ಒಂದೀಸ ಯಾರೋ ಪಾಪಣ್ಣಂಗೆ ಆಗ್ದೇ ಇದ್ದೋರು ಭರಮೇಗೌಡನಿಗೆ ಇಷಾರಿ ಕೊಟ್ರು. ಭರಮೇಗೌಡ ಒಂಚು ಕಾದು ಇಬ್ಬರನ್ನೂ ಅನಾಮತ್ತು ಇಡಿದುಬುಟ್ಟ. ಪಾಪಣ್ಣಂಗೆ ಚಪ್ಪಲಿ ಸೇವೆಂಪಾಗಿ ಮ್ಯೆಮೂಳೆ ಮುರಿದು ಓಯ್ತು. ಅವತ್ತೇ ಭರಮೇಗೌಡ್ನ ಗಡೇವರು ಪಡಖಾನೆ ಮುತ್ತಿ ಕುಡಿಯೋ ಅಷ್ಟು ಕುಡಿದು, ಉಳಿದದ್ದೆಲ್ಲಾ ಚೆಲ್ಲಿ ಬುಟ್ರು. ಪಾಪಣ್ಣನ ದಿವಾಳಿ ಎಬ್ಸೋಕೆ ಭರಮೇಗೌಡನೇ ಕಳ್ಳಭಟ್ಟಿ ಸಾರಾಯಿ ಮಾಡಿಸಿ ಮಾರೋದಿಕ್ಕೆ ಸುರು ಮಾಡ್ದ. ಪಾಪಣ್ಣನ ಯಾಪಾರ ಸಪಾಯ ಪಾಗೋಯ್ತು. ಎಂಗಾದ್ರೂ ಭರಮೇಗೌಡನ್ನ ಮಟ್ಟ ಆಕ್ಬೇಕೂಂತ ಪಾಪಣ್ಣ ಕಾಂಪ್ತಾ ಅವ್ನೆ!"

"ಪಾಪಣ್ಣ ನಮಗೆ ಕುಮ್ಮಕ್ಕು ಕೊಡ್ತಾನೆಯಲ್ಲವೇ?"

"ಕುಮ್ಮಕ್ಕು–ಪರಾಣ ಕೊಡ್ತಾನೆ ನನ್ನೊಡೆಯಾ?"

"ಇರಲಿ, ಸದ್ಯಕ್ಕೆ ಜವನಿನ್ನು ಮಾತಾಡಿಸುವುದು ಬೇಡ. ಜವನಿ ಕೊಲೆ

ಭರಮೇಗೌಡ ಮಾಡಿದ ಎಂದು ಹೇಳಿದೆಯಲ್ಲಾ, ಹೆಣ ಎಲ್ಲಿ ಹೂತಿದ್ದಾನೆ ನಿನಗೆ ಗೊತ್ತೇ ?"

"ಗೊತ್ತಿಲ್ಲ. ಚೆನ್ನಿಗೆ ಗೊತ್ತಿತ್ತು.ತೆ."

"ಚೆನ್ನೀನ ನೋಡಬೇಕಲ್ಲಯ್ಯಾ ?"

"ಅವಳನ್ನು ನೀವು ನೋಡಿದರೆ ಭರಮೇಗೌಡ ಜೀಪದೊರಸೆ ಬಿಟ್ಟಾನ ನನ್ನೊಡೆಯಾ. ನಿಮ್ಮ ದಮ್ಮಯ್ಯಾಂತೀನಿ. ಸುಮ್ಕಿರಿ"

"ನಾನು ಬಂದು ಹೋದ್ದ ವಿಷಯ ಗುಟ್ಟಾಗಿರಲಿ ಗೌಡ ನೀನು ಬಾಯಿ ಬಿಟ್ಟರೆ ಕೆಲಸ ಕೆಟ್ಟು ಹೋಗುತ್ತೆ."

"ಎಲ್ಲಾದ್ರು ಉಂಟಾ ?–ನನ್ನ ಉಡ್ಗಿ ನರಸೀ ವೆಂಕಣ್ಣಸ್ವಾಮಿಯೋರ ಮನೇಲವ್ಳೆ. ಏಸು ದೀಸ ಅವರ್ಮನೇಲಿ ಬುಟ್ಟಿರಲಿ ಬುದ್ದಿ."

"ನಿನಗೆ ಬೇಕಾದವರು ಯಾರಾದರೂ ಬೇರೆ ಊರಿನಲ್ಲಿದ್ದಾರೇನು ?"

"ನನ್ನ ಎಡ್ತಿ ಸೋದರಮಾವ ಕುಣಿಗಲ್ನಲ್ಲಿ ಅವ್ನೆ."

"ಅಲ್ಲಿಗೆ ಕೆಲವು ದಿನ ಕಳುಹಿಸಿ ಕೊಡು. ಹಿಂದಕ್ಕೆ ಕರೆಸು ಎಂದು ನಾನು ಹೇಳುವವರೆಗೆ ನೀನು ಅವಳನ್ನು ಕರೆಸಬೇಡ. ನರಸೀ ಕೈಲಿ ನಾನು ಅವನಿಗೆ ಊರ ಚಾವಡಿ ಮುಂದೆ ಮೆಟ್ನಲ್ಲಿ ಹೊಡೆಸ್ತೀನಿ."

"ಅಷ್ಟು ಮಾಡಿ ಬುದ್ದಿ. ನಮ್ಮ ಪರಾಣಾನಾ ನಡೆಮುಡಿ ಆಸ್ತೀವಿ. ಈ ರಾಕ್ಷಸ ಇರೋಟಂಕಾ ಊರ್ಗೆ ಕ್ಸೇಮ ಇಲ್ಲ."

ತನಿಖೆ ಕ್ರಮ ಮುಗಿಯಲು ಮೈಲಾರಯ್ಯ ವೆಂಕಣ್ಣನವರ ಅಪ್ಪಣೆ ಪಡೆದು ಊರು ಸೇರಿ, ಎಲ್ಲ ವಿವರಗಳನ್ನೂ ಬರೆದು ಡಿ. ಎಸ್. ಪಿ. ಸಾಹೇಬರಿಗೆ ಒಪ್ಪಿಸಿದ.

ಮೈಲಾರಯ್ಯನ ವರದಿ ಓದಿಕೊಂಡ ಸುಬ್ಬರಾಯಪ್ಪನವರು,

"ಈ ಕೇಸ್ ನೀವು ಹ್ಯಾಂಡಲ್ ಮಾಡಬಲ್ಲಿರಾ ಮೈಲಾರಯ್ಯ ?"

"ಅಪ್ಪಣೆಯಾದರೆ ಮಾಡ್ತೀನಿ ಸ್ವಾಮಿ. ಆದರೆ ಸಂಜೀವಪ್ಪ ಅಲ್ಲಿರ ಕೂಡದು."

"ನಿಮ್ಮನ್ನು ಸೋಲೂರಿಗೆ ಟ್ರಾನ್ಸ್‌ಫರ್ ಮಾಡಬೇಕಾಗುತ್ತೆ."

"ಕೇಸ್ ಮುಗಿದ ಮೇಲೆ ಪುನಃ ಬೆಂಗಳೂರಿಗೆ ಟ್ರಾನ್ಸ್‌ಫರ್ ಮಾಡಬೇಕು."

"ಇನ್‌ಕ್ರಿಮೆಂಟ್ [increment] ಕೊಡಿಸಿ ಟ್ರಾನ್ಸ್‌ಫರ್ ಮಾಡಿಸ್ತೀನಿ. ಈ ಸಾರೆ ಪೋಲೀಸ್ ಮೆಡಲ್‌ಗೆ ನಿಮ್ಮ ಹೆಸರು ಶಿಫಾರಸ್ಸು ಮಾಡಿಸ್ತೀನಿ."

"ತಾವು ಅನ್ನ ಕೊಡೋ ಧಣಿಗಳು. ತಾವು ಏನು ಹೇಳಿದರೂ ಮಾಡು ವುದಕ್ಕೆ ನಾನು ಸಿದ್ಧವಾಗಿದ್ದೇನೆ"

"ಡಿ. ಐ. ಜಿ. ಸಾಹೇಬರ ಹತ್ತಿರ ನಾನು ಮಾತನಾಡಬಹುದಷ್ಟೆ!"

"ಮಾತನಾಡಬಹುದು ಹಾಗೇ ನನಗೆ ಬೇಕಾದ ಸಿಬ್ಬಂದಿ ತೆಗೆದು ಕೊಂಡು ಹೋಗುವುದಕ್ಕೂ ಆರ್ಡರ್ ಮಾಡಿಸಬೇಕು."

"ಈ ಕೇಸಿನಲ್ಲಿ ನಿಮಗೆ ಫ್ರೀ ಹ್ಯಾಂಡ್ (free hand). ನಿಮಗೆ ಹೇಗೆ ಬೇಕೋ ಮಾಡಿ, ಡಿ. ಐ ಜಿ. ಸಾಹೇಬರ ಪರ್ ಮಿ ಷ ನ್ (Permission) ಕೊಡಿಸೋ ಜವಾಬ್ದಾರಿ ನನಗಿರಲಿ"

ಎಂದು ಸುಬ್ಬರಾಯಪ್ಪನವರು ಆಶ್ವಾಸನವಿತ್ತರು.

೪

ಅದೇ ತಿಂಗಳಲ್ಲಿ ಸಂಜೀವಪ್ಪನಿಗೆ ಹೆಡ್‌ಕ್ವಾರ್ಟರ್ಸ್‌ಗೆ (Head-Quarters) ಟ್ರಾನ್ಸ್‌ಫರ್ ಆಯಿತು.

ಅವನ ಸ್ಥಳಕ್ಕೆ ಮೈಲಾರಯ್ಯನನ್ನು ಡಿ.ಐ.ಜಿ ಸಾಹೇಬರು ನೇಮಿಸಿದರು.

ತನ್ನಿಂದ ಚಾರ್ಜ್ ತೆಗೆದುಕೊಳ್ಳಲು ಬಂದ ಮೈಲಾರಯ್ಯನನ್ನು ಪೋಲೀಸ್ ಸ್ಟೇಷನ್ನಿನಲ್ಲಿ ಸ್ವಾಗತಿಸಿದ ಸಂಜೀವಪ್ಪ ಕರ್ತವ್ಯಭಾಗ ಮುಗಿಸಿ, ಮೈಲಾರಯ್ಯನಿಗೊಂದು ಸಿಗರೇಟ್ ಕೊಟ್ಟು, ತಾನೊಂದು ಸಿಗರೇಟ್ ಹಚ್ಚಿಕೊಂಡು,

" ಸುಖವಾಗಿ ಬೆಂಗಳೂರಿನಲ್ಲಿದ್ದವರು ಇಲ್ಲಿಗೇಕೆ ಬಂದಿರಿ ಮೈಲಾರಯ್ಯ ?" ಎಂದು ಕೇಳಿದ.

" ನಾನು ಏನು ಮಾಡಲಿ ಸಂಜೀವಪ್ಪ. ಟ್ರಾನ್ಸ್‌ಫರ್ ಕ್ಯಾನ್ಸಲ್ ಮಾಡಿಸೋದಿಕ್ಕೆ ಹರತರದೂದು ಮಾಡಿದೆ. ಪ್ರಯೋಜನವಾಗಲಿಲ್ಲ. ಎಂ.ಎಲ್.ಎ ಗಳ ಕೈಯಲ್ಲಿ ಸಾಹೇಬರಿಗೆ ಹೇಳಿಸಿದೆ. 'ಇವೆಲ್ಲಾ ಕಛೇರಿಯ ಮಾಮೂಲು ಕ್ರಮ. ಇದರಲ್ಲಿ ನೀವು ಬಾಯಿ ಹಾಕಬೇಡಿ' ಎಂದು ಸಾಹೇಬರು ಎಂ.ಎಲ್.ಎ. ಗಳಿಗೆ ದಬಾಯಿಸಿದರು. ಹೋಗಲಿ ಬಿಡಿ–ಹೆಣ ಹೊರುವುದಕ್ಕೆ ಹೊರಟ ಮೇಲೆ ತಲೆಯ ಕಡೆಯೇನು, ಕಾಲು ಕಡೆಯೇನು ? ನಿಮಗೆ ಅನುಕೂಲವೇ ಆಯಿತಲ್ಲಾ. ಏಕೆ ಚಿಂತೆ ?"

" ಹೆಡ್‌ಕ್ವಾರ್ಟರ್ಸ್‌ನಲ್ಲಿ ಏನು ಅನುಕೂಲ ಮೈಲಾರಯ್ಯ–ಬರೋ ಸಂಬಳದಲ್ಲಿ ನಾವು ಜೀವನ ಮಾಡೋದಿಕ್ಕೆ ಆಗುತ್ತದೆಯೇ ?"

" ಹಾಗಾದರೆ ಈ ಊರು ಪರವಾಗಿಲ್ಲಾನ್ನಿ !"

" ಕಣಿ ಕೇಳಿ. ಇದೊಂದು ಚಿನ್ನದ ಗಣಿ ಕಣ್ರೀ. ನೀವು ಅಗೆದಷ್ಟೂ ಚಿನ್ನ ಸಿಕ್ಕುತ್ತದೆ."

" ಮಾಮೂಲು ಕುಳಗಳಿಗೆಲ್ಲಾ ಒಂದು ಮಾತು ಹೇಳಿಬಿಡೀಪ್ಪ."

" ಇಲ್ಲಿ ಭರಮೇಗೌಡಾಂತ ಒಬ್ಬ ದೊಡ್ಡ ಗೌಡ ಇದ್ದಾನೆ. ಮನುಷ್ಯ

ಒಲಿದರೆ ನಾರಿ, ಒಲಿಯದಿದ್ದರೆ ಮಾರಿ! ಅವನ ವಿರೋಧ ಮಾತ್ರ ಕಟ್ಟಿಕೊಳ್ಳ ಬೇಡಿ. ಅವನೂ ಸಂಪಾದನೆಗೆ ನಾಲ್ಕಾರು ಬಾಬು ಇಟ್ಟುಕೊಂಡಿದ್ದಾನೆ ಅದನ್ನು ಕಣ್ಣೆತ್ತಿ ನೋಡಬೇಡಿ. ನೀವು ಬೇಡ ಅಂದರೂ ಮಾಮೂಲು ನಿಮ್ಮ ಮನೆ ಬಾಗಿಲಿಗೆ ಬಂದು ಬೀಳತ್ತೆ ಈ ಊರಿನಲ್ಲಿ ಅವನಿಗಾಗದವರು ಬಹಳ ಜನ ಇದ್ದಾರೆ. ಅವರ ಮಾತಿಗೆ ನೀವು ಕಿವಿಗೊಟ್ಟರೆ ನಿಮ್ಮ ಪಾಡು ನಾಯಿ ಪಾಡಾಗುತ್ತದೆ. ಭರಮೇಗೌಡನದು ನಾಗರ ಮತ್ಸರ. ತನಗೆ ಅನ್ಯಾಯ ಮಾಡಿ ದವರನ್ನು ಅವನು ಜೀವದೊಂನೆ ಬಿಡುವುದಿಲ್ಲ. ನೀವೂ ಚಿಕ್ಕವರು. ಮುಂದಕ್ಕೆ ಬರತಕ್ಕವರು ಭರಮೇಗೌಡನ ವಿರೋಧ ಕಟ್ಟಿಕೊಂಡು ತೊಂದರೆಗೆ ಸಿಕ್ಕಬೇಡಿ."

"ನಿಮ್ಮ ಸಲಹೆಗೆ ತುಂಬ ಋಣಿಯಾಗಿದ್ದೇನೆ ಸಂಜೀವಪ್ಪ. ಭರಮೇ ಗೌಡನಂಥ ಹಿಂಡೋ ಆಕಳ ಕೆಚ್ಚಲು ಕುಯ್ಯುವಷ್ಟು ದಡ್ಡನೇ ನಾನು!" ಎಂದ.

ಸಂಜೀವಪ್ಪ ಬೆಂಗಳೂರಿಗೆ ಪ್ರಯಾಣ ಬೆಳಸಲು ಅವನ ಸ್ಥಾನದಲ್ಲಿ ವೈಲಾರಯ್ಯ ಪ್ರತಿಷ್ಠಿತನಾದ.

ಊರಿನ ಪದ್ಧತಿಯಂತೆ ಶಾನುಭೋಗರು, ಪಟೇಲರು, ಗೌಡರು, ಊರಿನ ಗಣ್ಯರು, ಮಿಡ್ಲ್‌ಸ್ಕೂಲ್, ಪ್ರೈಮರಿ ಸ್ಕೂಲ್ ಹೆಡ್‌ಮಾಸ್ಟರ ಸ್ಟೇಷನ್ನಿಗೆ ಬಂದು ಇನ್‌ಸ್ಪೆಕ್ಟರ್ ಸಾಹೇಬರ ಪರಿಚಯ ಮಾಡಿಕೊಂಡು ಹೋದರು.

ಒಂದು ವಾರ ಕಳೆಯಿತು.

ಭರಮೇಗೌಡ ಸ್ಟೇಷನ್ನಿನ ಕಡೆ ಸುಳಿಯಲಿಲ್ಲ.

ವೈಲಾರಯ್ಯ ತನ್ನ ನಂಬಿಕೆಯಾಳು ದಸ್ತಗೀರನನ್ನು ಹತ್ತಿರ ಕರೆದು,

"ಭರಮೇಗೌಡನ್ನ ಕಂಡು, ಇಲ್ಲಿಗೆ ಬರಬೇಕೆಂದು ಹೇಳು ದಸ್ತಗೀರ್. ಉಭಾಯಿಸಿ ಮಾತಾಡಬೇಡ. ಹಳೇ ಇನ್ಸಪೆಕ್ಟರು ನಿಮ್ಮ ವಿಷಯವೆಲ್ಲಾ ಹೇಳಿದ್ದಾರೆ. ನಿಮ್ಮ ಸ್ನೇಹ ವಿಶ್ವಾಸ ಬೆಳಸೋದಿಕ್ಕೆ ನಮ್ಮ ಸಾಹೇಬರು ಆತುರ ಪಡುತ್ತಿದ್ದಾರೆ ಎಂದು ಹೇಳು."

"ಅಚ್ಛಾ ಸಾಬ್"

ಎಂದು ಹೋದ ದಸ್ತಗೀರ್ ಮಧ್ಯಾನ್ಹಾನಂತರ ವೈಲಾರಯ್ಯನನ್ನು ಕಂಡು,

"ಓಗಿದ್ದೆ ಸರ್ಕಾರ್"–ಎಂದ.

"ಗೌಡ ಸಿಕ್ಕಿದ್ದನೇ?

"ಚಿಕ್ಕಿದ್ದ."

"ಏನು ಹೇಳಿದ?"

"ನೀವು ಏಳಿ ಕೊಟ್ಟಂಗೆ ಏಳ್ದೆ. ಅವನು ಮೀಸೆ ಮ್ಯಾಕೆ ಕೈ ಮಡಕ್ಕೊಂಡಿ 'ನಂಗೆ ಏಳಿ ಕಳ್ಸೋನು ಯಾವೋನ್ಲಾ ನಿನ್ನ ಇನ್ನೀಸ್‌ಪೆಕ್ಟ್ರು. ಆವಯ್ಯನ್ನೇ

ಇಲ್ಲೀಗೆ ಬಾನ್ನು ಅವನ ಬಾಯ್ಗೂ ಒಸಿ ಎಂಜಲು ಆಕ್ತೀನಿ !' ಎಂದ. ನನ್ಗೆ ಭಾಳ ಕೋಪ ಬಂತು ಸರ್ಕಾರ್. ಚಮಡ ಸುಲೀಬ್ಬುಡಾನಾಂತಿದ್ದೆ. ದಣಿ ಹುಕುಂ ಇಲ್ಲಾಂತ ಸುಮ್ಕಾದೆ."

"ಒಳ್ಳೆಯ ಕೆಲಸ ಮಾಡಿದೆ ದಸ್ತಗೀರ್. ನೀನು ಅವನ ಮೇಲೆ ಕೈ ಎತ್ತಿದ್ದರೆ ನನ್ನ ಕೆಲಸವೆಲ್ಲಾ ಕೆಟ್ಟು ಹಾಳಾಗುತ್ತಿತ್ತು. ಭರಮೇಗೌಡ ಭಾರಿ ದುಷ್ಮನ್ ದಸ್ತಗೀರ್. ಇವನನ್ನು ಉಪಾಯವಾಗಿ...."

"ಈಗ ಏನ್ಮಾಡೋದು ಸರ್ಕಾರ್ ?"

"ನಾಲ್ಕು ಒಳ್ಳೇ ನಿಂಬೆ ಹಣ್ಣು ತೆಗೆದುಕೊಂಡು ಬಾ."

ದಸ್ತಗೀರ್ ಹೋಗಿ ನಾಲ್ಕು ಸೊಗಸಾದ ನಿಂಬೆ ಹಣ್ಣುಗಳನ್ನು ತಂದು ಸಾಹೇಬರ ಮೇಜಿನ ಮೇಲಿಟ್ಟ.

ನಿಂಬೆಯ ಹಣ್ಣುಗಳನ್ನು ಕಿಸೆಯಲ್ಲಿ ಹಾಕಿಕೊಂಡು, ಮೇಲಕ್ಕೆದ್ದ ಮೈಲಾರಯ್ಯ,

"ನನ್ನ ಜತೆ ಬಾ ದಸ್ತಗೀರ್ " ಎಂದ.

ಇಬ್ಬರೂ ನೇರವಾಗಿ ಭರಮೇಗೌಡನ ಮನೆಯ ಕಡೆ ನಡೆದರು.

ಅವರು ಬರುತ್ತಿದ್ದುದನ್ನು ಕಂಡು ಒಳ ಬಾಗಿಲಿನಲ್ಲಿ ಚೆನ್ನಿ ನಿಂತಳು.

ಮೈಲಾರಯ್ಯ ಮನೆಯ ಹೆಬ್ಬಾಗಿಲಿಗೆ ಬಂದು,

"ಭರಮೇಗೌಡರು ಇಲ್ಲವೇನಮ್ಮಾ ?"

ಎಂದು ಕೇಳಿದ.

"ಇಲ್ಲ ಬುದ್ಧಿ."

"ಎಲ್ಲಿ ಹೋಗಿದ್ದಾರೆ."

"ತ್ವಾಟಕ್ಕೆ ಓಗವ್ರೆ."

"ನಾನು ಇಲ್ಲಿಗೆ ಹೊಸದಾಗಿ ಬಂದಿರುವ ಪೋಲೀಸ್ ಇನ್ಸ್‌ಪೆಕ್ಟರ್. ನನ್ನ ಹೆಸರು ಮೈಲಾರಯ್ಯ. ನೀನು ಭರಮೇಗೌಡರ ಹೆಂಡತಿ ಚೆನ್ನಿ ಅಲ್ಲವೇ ?"

"ಔದು ನನ್ನೊಡೆಯಾ ?"

"ಹಿಂದಿದ್ದ ಇನ್ಸ್‌ಪೆಕ್ಟರು ನಿನ್ನ ವಿಷಯ ಬಹಳ ಹೇಳಿದ್ದಾರೆ ಚೆನ್ನಿ."

"ಏನು ಹೇಳವ್ರೆ ಬುದ್ಧಿ."

"ನೀನು ಬಹಳ ಒಳ್ಳೆಯವಳು. ಮನೆಗೆ ಬಂದವರನ್ನು ಚೆನ್ನಾಗಿ ಉಪಚಾರ ಮಾಡುತ್ತೀ. ಒಳ್ಳೆಯ ಧಾರಾಳಿ ಎಂದು ಹೇಳಿದ್ದಾರೆ."

"ನಂದೇನು ಬುಡಿ ಬುದ್ಧಿ, ಅಳ್ಳಿ ಮುಕ್ಕ."

" ನೀನು ಹಳ್ಳಿಯವಳಾದರೂ ಒಳ್ಳೆಯ ಲಕ್ಷಣವಂತೆ ಚೆನ್ನಿ."

ಚೆನ್ನಿ ನಸುನಾಚಿದುದನ್ನು ಕಂಡು ಮೈಲಾರಯ್ಯ ಹೆಜ್ಜೆ ಮುಂದಿಟ್ಟು,

" ನಾನು ಬರ್ತೀನಿ ಚೆನ್ನಿ–ತೋಟಕ್ಕೇ ಹೋಗಿ ಭರಮೇಗೌಡರನ್ನು ಕಂಡು ಹೋಗ್ತೀನಿ."

" ಒಳಕ್ಕೆ ಬಂದು ಒಸಿ ಆಲು ತಗಾಳಾಕಿಲ್ವಾ ಬುದ್ದಿ."

" ಸಾವಕಾಶವಾಗಿ ಇನ್ನೊಂದು ದಿನ ಬರ್ತೀನಿ–ಅವತ್ತು ಹಾಲೂ ಹಣ್ಣು ಎಲ್ಲಾ ಕೊಡುವೆಯಂತೆ !"

ಎಂದು ದಸ್ತಗೀರನೊಂದಿಗೆ ಮುನ್ನಡೆದ.

ಭರಮೇಗೌಡನ ತೋಟ ಕಣ್ಣಿಗೆ ಬೀಳಲು ಮೈಲಾರಯ್ಯ,

" ದಸ್ತಗೀರ್–ನೀನು ಮುಂದೆ ಹೋಗಿ, ನಾನು ಬರುತ್ತಿರುವ ವಿಷಯ ಗೌಡನಿಗೆ ತಿಳಿಸು " ಎಂದ.

ಗೌಡನಿಗೆ ಸುದ್ದಿ ಮುಟ್ಟಿಸಿದ ದಸ್ತಗೀರ್ ತೋಟದ ಮನೆಯ ಮೆಟ್ಟಿಲು ಮೇಲೆ ನಿಂತು ಮೈಲಾರಯ್ಯ ಬಂದ ಕೂಡಲೆ,

" ಏಳ್ದಿ ಸರ್ಕಾರ್–ಗೌಡ ಕುಂತ್ಕೊಂಡೇ ' ಬರಲಿ ಬುಡು ' ಅಂದ "

" ಒಳ್ಳೆಯದು"

ಎಂದು ಒಳಗೆ ಪ್ರವೇಶಿಸಿದ ಮೈಲಾರಯ್ಯನನ್ನು ಭ ರ ಮೇ ಗೌ ಡ, ಕುಳಿತಲ್ಲಿಂದಲೇ ಆಪಾದಮಸ್ತಕ ನೋಡಿ,

" ನೀವೇನೋ ಒಸ ಇನಿಸ್‌ಪೇಟ್ರು" ಎಂದ.

" ಹೌದು ಗೌಡ್ರೇ."

ಗೌಡ ತನ್ನ ಲೋಡಿಗೆ ಆತುಕೊಂಡು ಒಂದು ಕಾಲು ಚಾಚಿ ಕುಳಿತು, ಬೀಡಿ ಎತ್ತಿಕೊಂಡು, ಕಡ್ಡಿಕೊರೆದು ಅದನ್ನು ಸುಡುತ್ತ,

" ಏನ್ಬಂದ್ರಿ ಇನೀಸ್‌ಪೇಟ್ರೇ ?" ಎಂದ.

ಮೈಲಾರಯ್ಯ ಅವನೆದುರು ಗಾದಿಯ ಮೇಲೆ ಕುಳಿತು, ಕಿಸೆಯಲ್ಲಿದ್ದ ನಾಲ್ಕು ನಿಂಬೇಹಣ್ಣುಗಳನ್ನು ತೆಗೆದು ಅವನ ಮುಂದಿಟ್ಟು,

" ನಿಮ್ಮ ಪರಿಚಯ ಮಾಡಿಕೊಳ್ಳುವುದಕ್ಕೆ ಬಂದೆ. ಹಳೆಯ ಇನ್ಸ್‌ಪೆಕ್ಟರ್ ಸಂಜೀವಪ್ಪನವರು ಎಲ್ಲಾ ಹೇಳಿ ಹೋಗಿದ್ದಾರೆ."

ಗೌಡ ಒಂದು ನಿಂಬೆಹಣ್ಣು ಕೈಗೆ ತೆಗೆದುಕೊಂಡು ಮೂಸಿ ನೋಡುತ್ತ,

" ಏನು ಏಳವ್ರೆ ?"

" ' ಭರಮೇಗೌಡರು ತುಂಬ ಒಳ್ಳೆಯವರು. ಪ್ರಾಣಕ್ಕೆ ಪ್ರಾಣ ಕೊಡು ವಂಥ ಮನುಷ್ಯ. ಈ ಊರಿನಲ್ಲಿ ಆವರಿಗಾಗದವರು ಬಹಳ ಜನ ಇದ್ದಾರೆ.

ಅವರ ಮಾತು ಕೇಳಿಕೊಂಡು ಭರಮೇಗೌಡರ ಮೇಲೆ ಕತ್ತಿ ಕಟ್ಟಬೇಡಿ–ಗೌಡರ ಜತೆ ನೀವು ಸ್ನೇಹವಾಗಿದ್ದರೆ ಅವರು ನಿಮ್ಮ ಕಷ್ಟ ಸುಖ ಚೆನ್ನಾಗಿ ನೋಡಿಕೊಳ್ಳುತ್ತಾರೆ–ನೀವೂ ಚಿಕ್ಕವರು–ಮುಂದಕ್ಕೆ ಬರತಕ್ಕನರು–ಗೌಡರ ಕೈಯಲ್ಲಿ ಶಹಭಾಸ್ ಎನಿಸಿಕೊಳ್ಳಿ' ಎಂದು ಹೇಳಿ ಹೋದರು "

ಗೌಡನ ಮುಖ ಪ್ರಸನ್ನವಾಯಿತು.

" ಇಷ್ಟು ತಿಳಿದೋರು, ಟೇಸನ್ನಿಗೆ ಬರೋಕೆ ನಂಗ್ಯಾಕೆ ಏಳಿಕಳಿಸಿದ್ರಿ ಇನಿಸ್‌ಪೆಟ್ರೇ ?"

" ಅದೆಲ್ಲಾ ಲೌಕಿಕ ಗೌಡರೇ. ನಾವೂ ನೀವೂ ಒಂದು ಎಂದು ಜನರಿಗೆ ಗೊತ್ತಾದರೆ, ನಿಮಗೆ ಯಾವ ಉಪಕಾರವನ್ನೂ ನಾನು ಮಾಡುವುದಕ್ಕಾಗುವುದಿಲ್ಲ. ಊರಿನ ಜನ ಕಿತಾಪತಿ ಮಾಡ್ತಾರೆ–ಮೇಲಿನ ಅಧಿಕಾರಿಗಳಿಗೆ ಮೂಗರ್ಜಿ ಗುಜರಾಯಿಸುತ್ತಾರೆ."

" ಹಂಗಾ–ನೀವು ಹುಷಾರಿ ಇದ್ದೀರಿ ಕಣ್ರೀ."

" ಏನು ಹುಷಾರಿಯೋ ಬಿಡಿ ಗೌಡ್ರೇ–ಪೋಲೀಸ್ ಖಾತೆಯಲ್ಲಿ ಹತ್ತು ವರ್ಷ ತಾಪೇದಾರಿ ಮಾಡಿದ್ರೂ ಉಣ್ಣೋಕಿದ್ರೆ ಉಡೋಕಿಲ್ಲ–ಉಡೋಕಿದ್ರೆ ಉಣ್ಣೋಕಿಲ್ಲ."

" ಅದಿರ್‍ಲಿ ಬುಡಿ ಇನಿಸ್ಪೇಟ್ರೆ–ನಾನು ನೋಡಿಕೊಂತೀನಿ–ನಾನು ಒಸಿ ವೈವಾಟು ಮಾಡಿಕೊಂಡಿವ್ನಿ–ನನ್ನ ನ್ಯಾಸ್ತ್ರು, ಅವರೂ ಇವರೂ ಕುಸೀಗೆ ಇಲ್ಲಿ ಇಸ್ಪೇಟ್ ಆಡೋಕೆ ಬತ್ತಾರೆ–ನೀವು ಏನೂ ತಿಳಿದ್ದಂಗೆ ಸುಮ್ಕೆ ಇದ್ದುಬುಟ್ರೆ, ಸಾಕು. ಮಾಮೂಲು ನಿಮ್ಮನೇಗೇ ಕಳಿಸ್ಕೊಡ್ತೀನಿ."

" ನನಗೂ ಇಸ್ಪೇಟಿನ ಖಯಾಲಿ ಗೌಡರೇ ?"

" ಬನ್ನಿ–ನಾನು ಬೇಡ ಅಂತೀನಾ ?"

" ಇಲ್ಲಿ ಕುಡಿಯೋಕೆ ಏನಾದರೂ ಸಿಕ್ಕುತ್ತದೆಯೇ ?"

" ಎಂಡ ಮಸ್ತಾಗಿ ಚಿಕ್ತದೆ–ಸಾರಾಯೂ ಚಿಕ್ತದೇನ್ನಿ."

" ಅದಲ್ರೀ–ಒಳ್ಳೇದು. ಬೀರ್, ಬ್ರ್ಯಾಂದಿ ವಗೈರೆ."

" ವಗೈರೆ ಬೆಂಗ್ಳೂರ್‍ನಿಂದ್ಲೇ ತರಿಸ್ಬೇಕು–ನಿಮಗೆ ಬೇಕಾದ್ರೆ ಏಳಿ–ನಾನ ತರಿಸ್ತೀನಿ."

" ಹೇಗೆ ?"

" ಬಸ್‌ನೋರು ಅವರಲ್ವಾ."

" ದುಡ್ಡು ನಾನು ಕೊಡ್ತೀನಪ್ಪಾ."

“ ಇರಲಿ ಬುಡಿ ಸೋಮಿ. ದುಡ್ಡಿಂದು ಯಾವ ದೊಡ್ಡ ಇಸ್ಯ–ನೀವು ನೀಯತ್ನಿಂದ ಇರಿ–ನಿಮಗೇನು ಬೇಕೋ ಸಪ್ಲೈ ನಾನು ಮಾಡ್ತೀನಿ–”

“ ಏನು ಬೇಕಾದರೂ ?”

“ ಅದ್ಯಾಕೆ ಹಂಗೆ ಕೇಳ್ತೀರಾ–ಭರಮೇಗೌಡನ ತಾವ ಯಾಪ್ಟಕ್ಕೆ ಕ್ಯಾಮ ಐತೆ.”

“ ನನ್ನ ಸಂಸಾರ ಇಲ್ಲಿ ಬರುವುದಕ್ಕೆ ಇನ್ನೂ ಮೂರು ನಾಲ್ಕು ತಿಂಗಳಾ ಗತ್ತೆ ಗೌಡರೇ.”

“ ದಿನಕ್ಕೊಂದು ರಖಮ್ ನೋಡೋರಂತೆ ಸುಮ್ಕಿರಿ ಸೋಮಿ–ಈ ಊರೇ ನಂದಾಗೈತೆ” ಎಂದ.

ಮೈಲಾರಯ್ಯ ಮೆಲ್ಲನೆ ಮೇಲಕ್ಕೇಳಲು, ಭರಮೇಗೌಡನೂ ಎದ್ದು ಹೊರಬಾಗಿಲಿನವರೆಗೆ ಬಂದ.

“ ಇನ್ನು ಬರ್ತೀನಿ ಗೌಡರೇ.”

“ ಇಲ್ಲಿಗೆ ಯಾವಾಗ ಬರ್ತೀರಿ ”

“ ನಾಳೆ ಸಾಯಂಕಾಲ.”

“ ವಗ್ಗೈರೆ ತರಿಸ್ಲಾ ?”

“ ತರಿಸಿ.”

“ ಇಸ್ವಾಸ ಮಡಿಕ್ಕೊಂಡಿರಿ ಸೋಮಿ.”

“ ನಿಮ್ಮ ವಿಶ್ವಾಸ ಮುಖ್ಯ ಗೌಡರೇ”

ಎಂದು ಅವನ ಅಪ್ಪಣೆ ಪಡೆದು ವಸ್ತಗೀರನೊಂದಿಗೆ ಗೃಹಾಭಿಮುಖನಾದ.

ಮೈಲಾರಯ್ಯ ಸೋಲೂರಿಗೆ ಬಂದುದು ಹಲ್ಲು ಕಳಚಿದ ನಾಗರ ಹಾವಿ ನಂತಾಗಿದ್ದ ಈಡಿಗರ ಪಾಪಣ್ಣನಿಗೆ ಹೊಸ ಜೀವ ಬಂದಂತಾಯಿತು.

ಮೈಲಾರಯ್ಯನೂ ಭರಮೇಗೌಡನ ಬುಟ್ಟಿಗೆಲ್ಲಿ ಬಿದ್ದಿರುವನೋ ಎಂಬ ಭಯ ಅವನನ್ನು ಮೊದಲು ಬಾಧಿಸಿತು. ಪಟೇಲ ನಂಜೇಗೌಡ ಪಾಪಣ್ಣನಿಗೆ,

"ಇನಿಸ್ಪೇಟ್ರು ನಮ್ಮ ಕಡೆ ಅವ್ರೆ–ಅವರಿಗೆ ನಾವು ಕುಮ್ಮಕ್ಕು ಕೊಟ್ಟರೆ ಭರಮೇಗೌಡನ ಮಟ್ಟ ಹಾಕಿ ಒಡ್ತಾರೆ"

ಎಂದು ಧೈರ್ಯ ಹೇಳಿದ್ದ.

ಒಂದು ದಿನ ಹೂವು, ಹಣ್ಣು, ಹಾರ ತಂದು ಪಾಪಣ್ಣ ಇನ್ಸ್‌ಪೆಕ್ಟರ್ ಮುಂದಿಟ್ಟು ಅಡ್ಡಬಿದ್ದ. ಮೈಲಾರಯ್ಯ ಅವುಗಳನ್ನು ನೋಡಿ,

"ಇದೆಲ್ಲಾ ಏನ್ರೀ?" ಎಂದ.

"ಮರ‍್ವಾದೆ ನೋಮಿ."

"ನಾನು ಸರ್ಕಾರದ ಸಂಬಳ ತಿನ್ನುತ್ತಾ ಇದ್ದೇನೆ ಪಾಪಣ್ಣ–ಈ ಮರ್ಯಾದೆ ಸ್ವೀಕರಿಸಕೂಡದು."

"ನಾವು ಅಣ್ಣಿಗೇನು ಬುದ್ದಿ."

"ಅದು ತಾನೆ ಬಿಟ್ಟೆ ಸಿಕ್ಕುತ್ತದೆಯೇ?"

ಎಂದು ತಟ್ಟೆಯಿಂದ ಒಂದು ಕಿತ್ತಲೆಹಣ್ಣು, ಒಂದು ಗುಲಾಬಿ ಹೂವನ್ನೆತ್ತಿ ಕೊಂಡು,

"ಮರ್ಯಾದೆ ಸ್ವೀಕರಿಸಿದ್ದೇನೆ–ಉಳಿದದ್ದನ್ನು ನೀವು ತೆಗೆದುಕೊಂಡು ಹೋಗಬಹುದು" ಎಂದ.

ಈ ಕುಳವನ್ನು ಒಲಿಸಿಕೊಳ್ಳುವುದು ಸುಲಭವಲ್ಲವೆಂಬುದು ಪಾಪಣ್ಣನಿಗೆ ಮನವರಿಕೆಯಾಯಿತು.

ಉದ್ದೇಶಪೂರ್ವಕವಾಗಿಯೇ ಪಾಪಣ್ಣನೊಂದಿಗೆ ಮಾತು ಬೆಳೆಸಿದ

ಮೈಲಾರಯ್ಯ ಊರಿನ ವಿದ್ಯಮಾನಗಳನ್ನೆಲ್ಲಾ ಅವನಿಂದ ಸಂಗ್ರಹಿಸಿಕೊಂಡು, ಭರಮೇಗೌಡನ ಸುದ್ದಿ ತೆಗೆದ.

ಪಾಪಣ್ಣ ಧೈರ್ಯ ತಂದುಕೊಂಡು,

" ಹಿಂದಿದ್ದ ಇನಿಸ್ಪೆಟ್ರು ಭರಮೇಗೌಡನ್ನ ಕಟ್ಕೊಂಡು ಮಾಡಬಾರದ ಅನ್ಯಾಯ ಮಾಡಿದ್ರು ಬುದ್ಧಿ."

" ನಾನೂ ಹಾಗೇ ಮಾಡುತ್ತೇನೆಂದು ಅನುಮಾನವೇ ?"

" ಇಲ್ಲ ಇಲ್ಲ. ತಾವು...."

" ನಾನು ನಿಮ್ಮ ಕಡೆಯೂ ಸೇರುವುದಿಲ್ಲ ; ಭರಮೇಗೌಡನ ಕಡೆಯೂ ಸೇರುವುದಿಲ್ಲ ಪಾಪಣ್ಣ. ಧರ್ಮ ಇರುವ ಪಕ್ಷದಲ್ಲಿ ನಿಂತು ಹೋರಾಡುವುದು ನನ್ನ ಕರ್ತವ್ಯ. ಹಳ್ಳಿ ಹಳ್ಳಿಗಳಲ್ಲಿ ಇಂಥ ಅಸಿಸ್ತು ಬೆಳೆದರೆ ದೇಶ ಬದುಕುತ್ತದೆಯೇ ? ಒಂದು ಕಡೆ ಭರಮೇಗೌಡನಂಥ ಪುಂಡರು-ಇನ್ನೊಂದು ಕಡೆ ಗಾಂಧಿ ಹೆಸರು ಹೇಳಿಕೊಂಡು ಮಾಡಬಾರದ ಅನ್ಯಾಯ ಮಾಡುತ್ತಿರುವ ಮುಖಂಡರು ಜನಗಳನ್ನು ಸುಲಿದು ತಿನ್ನುತ್ತಿದ್ದಾರೆ."

" ಸರ್ಕಾರ ಯಾಕೆ ಕಣ್ಮುಚ್ಚಿಕೊಂಡು ಕುಂತ್ಕೈತೆ ಬುದ್ಧಿ."

" ಜನ ನೀತಿಭ್ರಷ್ಟರಾದರೆ ಸರ್ಕಾರ ಏನು ಮಾಡುವುದಕ್ಕಾಗುತ್ತದೆ. ಪ್ರತಿಯೊಬ್ಬನ ನಡತೆ ನೋಡಿಕೊಳ್ಳಲು ಸರ್ಕಾರ ಒಬ್ಬೊಬ್ಬ ಪೋಲೀಸ್ ಕಾನಿಸ್ಟೇಬಲ್ ನಿಯಮಿಸುವುದಕ್ಕಾಗುತ್ತದೆಯೇ ? ಸರ್ಕಾರ ಇರೋದು ನಮ ಗೋಸ್ಕರ-ಸರ್ಕಾರದ ಕೆಲಸಕ್ಕೆ ನಾವು ಸಹಕಾರ ಕೊಡಬೇಕು. ನಾವು-ಸರ್ಕಾರ ಕೂಡಿ ಕೆಲಸ ಮಾಡಿದರೆ ಜನಕ್ಕೆ ಒಳ್ಳೆಯದಾಗತ್ತೆ ಎಂಬ ಭಾವನೆ ಜನಗಳಲ್ಲಿ ಮೂಡಬೇಕು."

" ಔದ್ರಾ ಬುದ್ಧಿ-ನೀವು ಏಳೋದು ದಿಟ-ಸರ್ಕಾರ ಚಂದಾಕಿ ಕೆಲ್ಸ ಮಾಡ್ಬೇಕಾದ್ರೆ ನಾವೆಲ್ಲಾ ಕುಮ್ಮಕ್ಕಾಗಬೇಕು."

" ಈಗ ನನಗೆ ನಿಮ್ಮ ಕುಮ್ಮಕ್ಕು ಬೇಕು."

" ಸ್ವಾಮಿ ಸೇವೆಗೆ ನಾನು ಸಿದ್ಧವಾಗಿವ್ನಿ."

" ಒಳ್ಳೆಯದು-ಭರಮೇಗೌಡನ ಎರಡನೆಯ ಹೆಂಡತಿ ಜವನಿ ಸತ್ತ ಸಂದರ್ಭ ಸಂದೇಹಾಸ್ಪದ ಎಂದು ನಮಗೆ ದೂರು ಬಂದಿದೆ. ಈ ವಿಷಯ ನಿಮಗೇನಾದರೂ ಗೊತ್ತೇ ?"

" ಗೊತ್ತು-ಭರಮೇಗೌಡ್ನೆ ಅವಳ ಬುಲ್ಡೆ ಒಡೆದು ಕೊಂದ."

" ಹೆಣದ ವಿಲೇವಾರಿ ಹೇಗಾಯಿತು."

"ತೋಟದ ಮಧ್ಯೆ ಒಂದು ಅಳ್ಳ ಅರೀತೈತೆ- ತಾವು ಪರಾಂಬರಿಸಿರ್ಬೋದು."

" ನೋಡಿದ್ದೀನಿ."

" ಅದರ ಮಗ್ಗುಲ್ಗೆ ಒಂದು ದೊಡ್ಡ ನಿಂಬೆಹಣ್ಣಿನ ಗಿಡ ಐತೆ."

" ಅದನ್ನೂ ನೋಡಿದ್ದೇನೆ."

" ಆ ಗಿಡದ ಬುಡದಾಗೆ ಜವಸಿ ಎಣ ಮನಗೈತೆ."

" ಈ ವಿಷಯ ನಿಮಗೆ ಹೇಗೆ ಗೊತ್ತು ?"

" ಇಂಗೇ...."

" ಏಳಿ ಪರವಾಗಿಲ್ಲ."

" ಈ ವಿಷಯ ನಾನು ಬಾಯಿ ಬುಟ್ಟೇಂತ ಭರಮೇಗೌಡಂಗೆ ತಿಳಿದ್ರೆ ಎಲ್ಡು–ಎಣ ಬೀಳ್ತೈತೆ."

" ಎರಡು."

" ಔದ್ರಾ–ನನ್ನದು, ಚೆನ್ನೀದು."

" ನನ್ನೊಂದಿಗೆ ನೀವು ಆಡಿದ ಯಾವ ಮಾತೂ ಹೊರಗೆ ಹೋಗದಂತೆ ನಾನು ನೋಡಿಕೊಳ್ಳುತ್ತೇನೆ."

" ಅಂಗಾದ್ರೆ ಸರಿ."

" ನಿಮಗೆ ಈ ವಿಷಯ ಚೆನ್ನಿ ಹೇಳಿದಳೇ ?"

" ಔದ್ರಾ."

" ಚೆನ್ನಿಗೂ ನಿಮಗೂ ವಿಶ್ವಾಸ ಇದ್ದದ್ದು ನಿಜವೇ ?"

" ತಮ್ತಾವ ಸುಳ್ಳು ಯಾಕೇಳ್ಲಿ–ನಿಜ ಬುದ್ದಿ."

" ಚೆನ್ನಿ ನಮ್ಮ ಕಡೆ ಸಾಕ್ಷಿ ಹೇಳುತ್ತಾಳೆಯೇ ?"

" ಅದ್ದೆಂಗೋ ನಾನು ಹ್ಯಾಗೇಳ್ಲಿ ?"

" ಚೆನ್ನೀನ ಕಾಣಬೇಕಲ್ಲ–ಏನು ಮಾಡುವುದು ?"

" ವರ ಮನೆ ತಾಕ್ಕೆ ಓಗ್ಬೇಡಿ ಬುದ್ದಿ–ಭರಮೇಗೌಡಂಗೆ ಸುಳು ಚಿಕ್ಕಿದ್ರ 'ಸಬ್ಬಲ್‌ರಾಣಿ' ಮಾಡಿಸ್ಬಿಡ್ತಾನೆ."

" ಹಾಗಾದರೆ...."

" ಸೋಮವಾರ ಸಂತೆ ಮಾಡೋಕೆ ಚೆನ್ನಿ ಬತ್ತಾಳೆ–ಆಗ ಮಾತಾಡಿ ನ್ಬೋದು."

" ಸಂತೆಯಲ್ಲಿ ಮಾತನಾಡೋದಿಕ್ಕೆ ಆಗುತ್ತದೆಯೇ ?"

" ಒಂದು ಕೆಲ್ಸ ಮಾಡ್ತೀರಾ ಬುದ್ದಿ."

" ಏನು ಹೇಳಿ."

" ಸಂತೇಮಾಳಕ್ಕೆ ಅತ್ತಿರ್ದಲ್ಲೇ ನನ್ನ ಪಡಶಾನೆ ಐತೆ–ಮುದ್ಯಾನ ಗಿರಾಕಿಗಳು ಇರೋಕಿಲ್ಲ–ತಾವು ಅಲ್ಲೀಗೆ ಚೆನ್ನಿನ ಬಾ ಅಂತಾ ಏಳಬೈದು."

" ಪಡಖಾನೆ ಒಳಗೆ ರೂಮು ಇದೆಯೇ ಪಾಪಣ್ಣ."

" ಐತೆ ನನ್ನೊಡೆಯಾ–ಅದ್ನೇ ಉಗ್ರಾಣ ಮಾಡಿಕೊಂಡಿನ್ವಿ–ತಾವು ಬತ್ತೀನೀಂದ್ರೆ ಎಲ್ಲಾ ಕಿಳೀನ್ ಮಾಡ್ಸಿ ಮಡಗ್ತೀನಿ."

" ಹಾಗೇ ಮಾಡಿ–ನಾನು ಸೋಮವಾರ ಬರ್ತೀನಿ "

" ವೂವ–ಅಣ್ಣು ಮಡಕ್ಕೊಳ್ಳಿ."

" ಅದು ಮಾತ್ರ ಬೇಡ–ವೋಲೀಸ್ನೋರೇ ರೂಲ್ಸ್ ಬಿಟ್ಟುಹೋಗೋದು ತರವಲ್ಲ"

ಎನ್ನಲು ಪಾಪಣ್ಣ ಹೂವು, ಹಣ್ಣಿನ ತಟ್ಟೆ ತೆಗೆದುಕೊಂಡು ಹೊರ ಹೊರಟ.

# ೬

ಸೋಲೂರಿನ ಸಂತೆ ಸುಪ್ರಸಿದ್ಧವಾಗಿತ್ತು. ಸುತ್ತಮುತ್ತಲಿನ ಹಳ್ಳಿಗಳಲ್ಲಿ ಬೆಳೆಯುತ್ತಿದ್ದ ಆಲೂಗೆಡ್ಡೆ, ಮೆಣಸಿನಕಾಯಿ, ಕಬ್ಬು, ನಾಸಿವೆಗಳಿಗೆ ಸೋಲೂರೇ ಮಾರುಕಟ್ಟೆಯಾಗಿತ್ತು.

ಸೋಲೂರಿನ ಜನ ಪ್ರತಿವಾರ 'ಸಂತೆ ಮಾಡಿ' ವಾರಕ್ಕಾಗುವಷ್ಟು ಆಹಾರ ಸಾಮಗ್ರಿಗಳನ್ನು ಸಂಗ್ರಹಿಸಿಟ್ಟುಕೊಳ್ಳುತ್ತಿದ್ದರು

ಸಂತೆ ಸೋಲೂರಿನ ಜನಕ್ಕೆ ವ್ಯವಹಾರ ಸಾಧನವಾಗಿದ್ದಂತೆ ವಿಹಾರ ಸಾಧನವೂ ಆಗಿತ್ತು. ಸಂತೆಯ ನೆಪದಲ್ಲಿ ಜನ ಒಂದು ದಿನ ಆರಾಮವಾಗಿ ಕಳೆಯುತ್ತಿದ್ದರು.

ಸಂತೆಯ ಉಸ್ತುವಾರಿ ವ್ಯವಸ್ಥೆ ಮಾಡುತ್ತಿದ್ದ ಮೈಲಾರಯ್ಯ, ದಸ್ತಗೀರ ನನ್ನು ಕರೆದು,

"ನಾಳೆ ಸಂತೆ ಡ್ಯೂಟಿ (Duty) ಯಾರು ಯಾರದ್ದು ದಸ್ತಗೀರ್" ಎಂದು ಕೇಳಿದ.

"ಸಿಂಗ್, ಕರಿಯಪ್ಪ, ಬಸಣ್ಣ, ಫಕ್ರೂ ಓಗ್ತಾರೆ ಸರ್ಕಾರ್."

"ನೀನು ?"

"ನಂಗೆ ಡೂಟಿ ಇಲ್ಲ."

"ನೀನೂ ನಾಳೆ ಡ್ಯೂಟಿ ಮಾಡು ದಸ್ತಗೀರ್."

"ಹುಕುಂ ಸರ್ಕಾರ್."

"ಸಂತೆಗೆ ಚೆನ್ನಿ ಬರ್ತ್ತಾಳೆ–ಚೆನ್ನಿ ಯಾರು ಗೊತ್ತೋ ?"

"ಭರಮೇಗೌಡ್ನ ಅವರತ್."

"ಹೌದು. ಅವಳನ್ನು ನೀನು ಮಾತನಾಡಿಸಿ, ಪಾಪಣ್ಣನ ಪಡಖಾನೆ ಹತ್ತಿರ ಕಳಿಸಿಕೊಡಬೇಕು."

ದಸ್ತಗೀರ್ ಅನುಮಾನಿಸಿದುದನ್ನು ಕಂಡ ಮೈಲಾರಯ್ಯ,

"ಭರಮೇಗೌಡನ ಮೇಲೆ ಚಾರ್ಜ್‌ಶೀಟ್ (Charge sheet) ಹಾಕ ಬೇಕಾದರೆ ಚೆನ್ನಿಯ ಸಾಕ್ಷಿ ಬೇಕು ದಸ್ತಗೀರ್."

"ಇದೆಲ್ಲಾ ಖರಾಬ್ ನಾವಾಸ ಸರ್ಕಾರ್."

"ಹೌದು. ಅದನ್ನು ನಾನು ಬಲ್ಲೆ. ಆದರೇನು ಮಾಡುವುದು ದಸ್ತಗೀರ್. ಹೇಗಾದರೂ ಭರಮೇಗೌಡನ್ನ ಬುಕ್ (Book) ಮಾಡದಿದ್ದರೆ ನಾನು ಮನೆಗೆ ಹೋಗಬೇಕಾಗುತ್ತದೆ"

"ಆಗಲಿ ಸರ್ಕಾರ್"

ಎಂದು ದಸ್ತಗೀರ್ ಒಪ್ಪಿಕೊಂಡ

ತನ್ನ ಬಗ್ಗೆ ದಸ್ತಗೀರ್ ಕೆಟ್ಟ ಭಾವನೆ ತಳೆಯಬಾರದೆಂಬುದು ಮೈಲಾ ರಯ್ಯನ ಪರಮಾಕಾಂಕ್ಷೆಯಾಗಿತ್ತು. ಇದಕ್ಕೆ ಕಾರಣವೂ ಇತ್ತು.

ಚೆನ್ನಪಟ್ಟಣದಲ್ಲಿ ಸುಬ್ಬರಾಯಪ್ಪನವರು ಇನ್ಸ್‌ಪೆಕ್ಟರಾಗಿದ್ದರು ಅವರ ಕೈಕೆಳಗೆ ಮೈಲಾರಯ್ಯ ಸಬ್–ಇನ್ಸ್‌ಪೆಕ್ಟರಾಗಿ ಕೆಲಸ ಮಾಡುತ್ತಿದ್ದ. ದಸ್ತಗೀರ್ ಪೋಲೀಸ್ ಕಾನಿಸ್ಟೇಬಲ್ ದೊಡ್ಡ ಸಂಸಾರವಂದಿಗನಾದ ದಸ್ತಗೀರ್ ಆಗಾಗ್ಗೆ 'ಶಾಕಾಯ ಲವಣಾಯ' ಗಿಟ್ಟಿಸಿಕೊಳ್ಳುತ್ತಿದ್ದ. ದಸ್ತಗೀರನ ವ್ಯವಹಾರ ತಿಳಿದಿದ್ದರೂ ಮೈಲಾರಯ್ಯ ಅತ್ತ ಲಕ್ಷ್ಯ ಕೊಟ್ಟಿರಲಿಲ್ಲ. ಅವನ ಬಗ್ಗೆ ಸುಬ್ಬರಾಯಪ್ಪನವರಿಗೆ ಫಿರ್ಯಾದಿಗಳು ಬರಲು ಅವರು ಎಚ್ಚರಿಕೆಯಿತ್ತರು. ನಾಲ್ಕು ದಿನ ಜಾಗರೂಕನಾಗಿದ್ದ ದಸ್ತಗೀರ್ ಮತ್ತೆ ತನ್ನ 'ಮೇಲು ಸಂಪಾದನೆ' ಆರಂಭಿಸಿದ ದಸ್ತಗೀರನ ಮೇಲೆ ದ್ವೇಷ ಸಾಧಿಸುತ್ತಿದ್ದ ಲಾರಿ ಮಾಲಿಕನೊಬ್ಬ ಅವನಿಗೆ ಐವತ್ತು ರೂಪಾಯಿ ಸಂಭಾವನೆಯಿತ್ತು ಇನ್ಸ್‌ಪೆಕ್ಟರಿಗೆ ದೂರು ಕೊಟ್ಟ. ದಸ್ತಗೀರನ ಅಪವಾದ ಋಜುವಾತಾಗಲು, ಅವನನ್ನು ಡಿಸ್‌ಮಿಸ್ ಮಾಡಲು ಸುಬ್ಬರಾಯಪ್ಪ ಮನಸ್ಸು ಮಾಡಿದರು.

ದಸ್ತಗೀರನ ತಲೆಯಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ಮೈಲಾ ರಯ್ಯನ ಎರಡು ಪಾದಗಳನ್ನೂ ಬಲವಾಗಿ ಹಿಡಿದುಕೊಂಡು,

'ನೀವೇ ನನ್ನ ಮಾ–ಬಾಪ್. ನನ್ನ ಬಚಾವ್ ಮಾಡಿ ಸರ್ಕಾರ್– ಇನ್ನು ಇಂಥ ಕೆಲಸ ಮಾಡೋದಿಲ್ಲ–ಸಾಯೋಟಂಕಾ ನಿಯತ್ತಿನಿಂದ ನಿಮ್ಮ ಚಾಕರಿ ಮಾಡ್ತೀನಿ'

ಎಂದು ಹಲುಬಿದ.

ಮೈಲಾರಯ್ಯ ಅವನಿಗೆ ಸಾಕಷ್ಟು ಛೀಮಾರಿ ಮಾಡಿ,

"ಸಾಹೇಬರು ಮನಸ್ಸು ಮಾಡಿದ ಮೇಲೆ, ಅವರ ಮನಸ್ಸನ್ನು

ಬದಲಾಯಿಸುವುದಕ್ಕಾಗುತ್ತದೇನಯ್ಯಾ–ಸಾಹೇಬರೇ ನಿನಗೆ ಎಚ್ಚರಿಕೆ ಕೊಟ್ಟರೂ ನೀನು ಲಕ್ಷಿಸಲಿಲ್ಲ ಈಗ ಏನುಮಾಡಲು ಸಾಧ್ಯ ?"

" ತಾವು ಒಂದು ಮಾತು ಏಳಿದ್ರೆ ಸಾಯೇಬ್ರು ಕೇಳ್ತಾರೆ ಸರ್ಕಾರ್. ಎಂಗಾದರೂ ಗರೀಬನ್ನ ಕಾಪಾಡಿ "

ಮೈಲಾರಯ್ಯ ' ದೇವರ ಮೇಲೆ ಭಾರ ಹಾಕಿ ' ಆಫೀಸಿನ ಕೆಲಸದ ನೆಪ ಮಾಡಿಕೊಂಡು ಸುಬ್ಬರಾಯಪ್ಪನವರನ್ನು ಕಾಣಲು ಬಂದ

ಫೈಲುಗಳ ವಿಲೇವಾರಿ ಮುಗಿದ ಮೇಲೆ, ಮೈಲಾರಯ್ಯ ಅಲ್ಲೇ ಇದ್ದುದನ್ನು ಕಂಡ ಸುಬ್ಬರಾಯಪ್ಪನವರು,

" ಇನ್ನೇನು ವಿಷಯ ಮೈಲಾರಯ್ಯ" ಎಂದರು

ಮೈಲಾರಯ್ಯ ತಗ್ಗಿಸಿದ ದನಿಯಲ್ಲಿ,

" ದಸ್ತಗೀರನ ವಿಷಯ ಸಾರ್ " ಎಂದ.

ಸುಬ್ಬರಾಯಪ್ಪನವರ ವೈರಕ್ತ ಮುಖಕ್ಕೇರಿತು. ಛಟ್ಟನೆ ಅವರು ಮೈಲಾರಯ್ಯನ ಕಡೆ ತಿರುಗಿ,

" ಏನಂತೆ ಅವನ ಗೋಳು " ಎಂದರು

" ಸಾಹೇಬ್ರು ಡಿಸ್‌ಮಿಸ್ ಮಾಡಿಸ್ತಾರೆ ಎಂದು ಒಡಕೋತಾ ಇದ್ದಾನೆ ಸಾರ್."

" ಹೌದು–ಅವನನ್ನ ಡಿಸ್‌ಮಿಸ್ ಮಾಡಿಸಬೇಕೆಂದಿದ್ದೇನೆ ಇಂಥ ಅಯೋಗ್ಯರಿಂದ ಪೋಲೀಸ್ ಡಿಪಾರ್ಟ್‌ಮೆಂಟಿಗೇ ಕೆಟ್ಟ ಹೆಸರು. ನಾನೇ ವಾರ್ನ್ (warn) ಮಾಡಿದರೂ ಅವನಿಗೆ ಲಕ್ಷ್ಯವೇ ಇಲ್ಲವಲ್ರೀ–ಲಂಚ, ರುಷವತ್ತು ತೊಗೊಳ್ಳೊಣ್ಣಾಂದ್ರೆ ಏನ್ರೀ ?–No, No, that fellow must go home."

" ಅವನಿಗೆ ಎಂಟು ಜನ ಮಕ್ಕಳು ಸಾರ್–ಇಬ್ಬರು ಬೀಬಿಯರು. ಬಡವ ಕೆಟ್ಟುಹೋಗ್ತಾನೆ."

" ಅದಕ್ಕೆ ನಾನು ಹೊಣೆಯೇ ? ಮಕ್ಕಳು ಮರಿ ಹೆಚ್ಚು ಅಂತ ಹೇಳಿ ಲಂಚ ಹೊಡೆಯೋದೇನ್ರೀ ?"

" ಮಣ್ಣು ತಿನ್ನೋ ಕೆಲಸ ಮಾಡಿದ್ದಾನೆ–ಈಗ ಪಶ್ಚಾತ್ತಾಪ ಪಡುತ್ತಿದ್ದಾನೆ. ಈ ಸಲ ಹೇಗಾದರೂ ಮಾಡಿ ಕ್ಷಮಿಸಿಬಿಡಿ ಸಾರ್. ಇನ್ನೊಂದು ಸಲ ಅವನು ಲಂಚಕ್ಕೆ ಕೈಯೊಡ್ಡಿದರೆ ನಾನೇ ಅರಿಕೆ ಮಾಡಿಕೊಳ್ಳುತ್ತೇನೆ."

" ಇದೇನ್ರೀ ಇವೆಲ್ಲಾ–ನಾವೇನು ಪೋಲೀಸ್ ನೌಕರರೋ ಪೂರ್ಣಯ್ಯನ ಅನ್ನಛತ್ರದ ಪಾರುಪತ್ತೇಗಾರರೋ ?"

" ಸ್ವಾಮಿ–ತಾವು ನಮಗೆ ತಾಯಿ ಸಮಾನ. ತಿಳುವಳಿಕೆಯಿಲ್ಲದೆ ನಾವು ತಪ್ಪು ಮಾಡ್ತೀವಿ–ತಾವು ಬಯ್ಯಿರಿ–ಹಂಟರ್ ತೊಗೊಂಡು ನಾಲ್ಕು ಬಾರಿಸಿ–ಒಂದೇ ನಲಕ್ಕೆ ಹೊಟ್ಟೆಯ ಮೇಲೆ ಹೊಡೆದರೆ ನಾವೆಲ್ಲಿಗೆ ಹೋಗಬೇಕು–ಯಾರ ಹತ್ತಿರ ನಮ್ಮ ಕಷ್ಟಸುಖ ಹೇಳಿಕೊಳ್ಳಬೇಕು."

" ನನ್ನ ಏನು ಮಾಡೂಂತೀರಿ ?"

" ದಸ್ತಗೀರ್ ಜವಾಬ್ದಾರಿ ನಾನು ವಹಿಸಿಕೊಳ್ಳುತ್ತೇನೆ. ಇನ್ನೊಂದು ಬಾರಿ ಅವನ ಮೇಲೆ ಕಂಪ್ಲೇಂಟ್ ಬಂದರೆ, ನನಗೆ ಶಿಕ್ಷೆ ವಿಧಿಸಿ–ಮನುಷ್ಯ ಒಳ್ಳೆಯವನು, ದಕ್ಷ, ಧೈರ್ಯಶಾಲಿ. ಆದರೆ ಸ್ವಲ್ಪ ಆಶೆಬುರುಕ ಅವನನ್ನು ತಿದ್ದುವ ಜವಾಬ್ದಾರಿ ನನಗೆ ವಹಿಸಿ ಸ್ವಾಮಿ."

ಸುಬ್ಬರಾಯಪ್ಪನವರು ಮುಜುಗರ ಪಟ್ಟುಕೊಂಡು,

" ಆಗಲಿ ಹೋಗೀಯಪ್ಪ. ಸಿವಿಯರಾಗಿ ವಾರ್ನ್ ಮಾಡಿ (Severe warning)–ಇನ್ನೊಂದು ಸಲ ಅವನ ಮೇಲೆ ಕಂಪ್ಲೇಂಟ್ ಬಂದರೆ, ನಾನು ಎನ್‌ಕ್ವೈರಿ (enquiry) ಕೂಡ ಮಾಡೋದಿಲ್ಲ–ಡಿಸ್‌ಮಿಸ್ ಮಾಡಿಬಿಡ್ತೀನಿ."

" ಹಾಗೇ ಆಗಲಿ ಸ್ವಾಮಿ "

ಎಂದು ಮೈಲಾರಯ್ಯ ಒಪ್ಪಿಕೊಂಡ.

ಮೈಲಾರಯ್ಯ ಮಾಡಿದ ಉಪಕಾರವನ್ನು ದಸ್ತಗೀರ್ ಮರೆಯಲಿಲ್ಲ.

ದಸ್ತಗೀರನ ಸ್ವಾಮಿನಿಷ್ಠೆ, ಸೇವೆ, ಶ್ರದ್ಧೆ ಕಂಡು ಮೈಲಾರಯ್ಯನಿಗೆ ಅವನ ಮೇಲೆ ವಿಶ್ವಾಸ ಬೆಳೆಯಿತು ತಾನು ಟ್ರಾನ್ಸ್‌ಫರ್ (Transfer) ಆಗಿ ಹೋಗುತ್ತಿದ್ದ ಕಡೆಗೆಲ್ಲಾ ದಸ್ತಗೀರನನ್ನು ಕರೆದೊಯ್ಯುತ್ತಿದ್ದ.

ಮೈಲಾರಯ್ಯ ಮಾಡಿದ್ದ ಉಪಕಾರ ದಸ್ತಗೀರನ ಮೇಲೆ ವಿಲಕ್ಷಣ ಪರಿಣಾಮವನ್ನುಂಟು ಮಾಡಿ ಅವನ ಜೀವನವನ್ನೇ ಪರಿವರ್ತನಗೊಳಿಸಿತ್ತು. ಮೈಲಾರಯ್ಯನನ್ನು ಸರ್ಪಕಾವಲು ಕಾಯುತ್ತಿದ್ದ ದಸ್ತಗೀರ್, ಅವನಿಗೆ ಯಾವ ಕೆಡಕೂ ಆಗದಂತೆ ಎಚ್ಚರವಾಗಿದ್ದ.

ದಸ್ತಗೀರನ ಸದ್ವರ್ತನೆ ಮೈಲಾರಯ್ಯನ ಮೇಲೂ ಪರಿಣಾಮವನ್ನುಂಟು ಮಾಡಿತ್ತು. ತನ್ನ ಮಾತು, ಕೃತಿಗಳ ಬಗ್ಗೆ ದಸ್ತಗೀರ್ ದುರಭಿಪ್ರಾಯ ತಳೆಯಬಾರದೆಂಬ ಇಚ್ಛೆ ಅಂಕುರಿಸಿ, ಅವನ ಬಾಳಿಗೂ ನೀತಿಯು ನೆಲಗಟ್ಟು ಸ್ಥಾಪನೆಯಾಗಿತ್ತು.

## ೭

ಇನ್ಸ್‌ಪೆಕ್ಟರ್ ಸಾಹೇಬರನ್ನು ಸ್ವಾಗತಿಸುವುದಕ್ಕೆ ಯೋಗ್ಯ ವ್ಯವಸ್ಥೆ ಮಾಡಲು ಪಾಪಣ್ಣ ವಿಶೇಷ ಶ್ರಮ ವಹಿಸಿದ್ದ. ಅವನ ಪಡಖಾನೆಯ ಉಗ್ರಾಣ, ಉತ್ತಮ 'ದಿವಾನ್ ಖಾನೆ'ಯಾಗಿ ಮಾರ್ಪಾಡಾಗಿತ್ತು. ಉಗ್ರಾಣದಲ್ಲಿದ್ದ ಸಾಮಾನು ಸರಂಜಾಮನ್ನು ಹೊರಗೆ ಸಾಗಿಸಿ, ಅದನ್ನು ಚೆನ್ನಾಗಿ ಶುದ್ಧಗೊಳಿಸಿ, ಗೋಡೆಯ ಬದಿಗೊಂದು ಮೇಜು, ಎರಡು ಕುರ್ಚಿ ಹಾಕಿಸಿ, ನೆಲದ ಮೇಲೆ ಜಮಖಾನಾ, ಲೋಡು, ದಿಂಬುಗಳನ್ನು ಅಣಿಮಾಡಿದ.

ಮೈಲಾರಯ್ಯ ಸಂತೇಮಾಳವನ್ನೊಮ್ಮೆ ಪರಾಮರ್ಶಿಸಿ, ಮೆಲ್ಲನೆ ಪಡ ಖಾನೆಯ ಬಳಿಗೆ ಬಂದ

ಬಾಗಿಲಲ್ಲೇ ಕಾದಿದ್ದ ಪಾಪಣ್ಣ, ಇನ್ಸ್‌ಪೆಕ್ಟರನ್ನು ಕರೆದೊಯ್ದು ರೂಮಿನಲ್ಲಿ ಕೂಡಿಸಿ, ಅವನ ಮುಂದೆ ಗೋಲ್ಡ್‌ಫ್ಲೇಕ್ ಸಿಗರೇಟಿನ ಡಬ್ಬ, ಬೆಂಕಿಯ ಪೊಟ್ಟಣ ಇಟ್ಟ.

ಮೈಲಾರಯ್ಯ ಒಂದು ಸಿಗರೇಟ್ ಹೊತ್ತಿಸಿಕೊಂಡು, ರೂಮಿನ ಸುತ್ತ ಕಣ್ಣು ಹಾಯಿಸಿ,

" ನಾನು ನಿಮಗೆ ಬಹಳ ಶ್ರಮಕೊಟ್ಟೆ ಪಾಪಣ್ಣ" ಎಂದ.

" ಇದೆಲ್ಲಾ ಏನು ಶ್ರಮ ಸ್ವಾಮಿ-ಬಡವನ ಗುಡಿಸಲಿಗೆ ತಾವು ದೊಡ್ಡ ಮನಸ್ಸು ಮಾಡಿ ಬಂದಿರೋದು ನನ್ನ ಪುಣ್ಯ-ಸ್ವಲ್ಪ ಕಾಫಿ ತಿಂಡಿ ಏರ್ಪಾಡು ಮಾಡಿದ್ದೀನಿ-ತಾವು ಒಲ್ಲೆಯೆಂದರೆ ನನ್ನ ಮನಸ್ಸಿಗೆ ತುಂಬ ನೋವಾಗುತ್ತದೆ.'

" ತೆಗೆದುಕೊಳ್ಳುತ್ತೇನೆ-ಚೆನ್ನಿಯೂ ಬರಲಿ."

" ಅವಳನ್ನು ಯಾರು ಕರ್ಕೊಂಡು ಬರ್ತಾರೆ ?"

" ದಸ್ತಗೀರ್."

" ಡ್ರಿಂಕ್ಸ್ ಏನಾದರೂ...."

ಮೈಲಾರಯ್ಯ ನಕ್ಕು,

" ನಿಮ್ಮ ಪಡಖಾನೆ ಮಾಲೋ ?"

"ಅಲ್ಲ ಮಾಸ್ವಾಮಿ–ಬೆಂಗ್ಳೂರ್ನಿಂದ ಸ್ಕ್ಯಾಚ್ ತರಿಸಿದ್ದೀನಿ."

"ಸ್ವಲ್ಪ ತೆಗೆದುಕೊಳ್ಳುತ್ತೇನೆ. ಚೆನ್ನಿ ಹೇಗೆ ?"

"ಅವಳೂ ತೊಗೋತಾಳೆ."

"ಅದಲ್ರೀ ನಾನು ಕೇಳಿದ್ದು–ಮಿಕ್ಕ ವಿಷಯ ?"

"ಜಾತಿ ಮರಿ–ಒಳ್ಳೇ ಗೇಂದಿ ಹೆಂಗಸು."

"ನಾನು ಕೇಳಿದ್ದಕ್ಕೆ ಸರಿಯಾಗಿ ಉತ್ತರ ಹೇಳ್ತಾಳೋ ?"

ಸ್ವಲ್ಪ ವಿಚಾರ ಮಾಡಿದ ಪಾಪಣ್ಣ,

"ಮಾಸ್ವಾಮಿ, ತಾವು ದೊಡ್ಡವರು–ನಾನು ಹೆಂಡ ಮಾರೋ ಗುಲಾಮ. ತಮಗೆ ಬುದ್ಧಿ ಹೇಳೋ ಅಷ್ಟು ನಂಗೆ ತಾಖತ್ ಇಲ್ಲ–ಆದ್ರೆ ನಾನೂ ನಾಲ್ಕು ಕೆರೆ ನೀರು ಕುಡಿದ ಆಸಾಮಿ–ನಂಗೆ ತಿಳಿದಿರೋ ಒಂದೆರಡು ವಿಷಯ, ಅಪ್ಪಣೆ ಯಾದರೆ ಅರಿಕೆಮಾಡಿಕೊಳ್ತೀನಿ."

"ಹೇಳಿ ಪಾಪಣ್ಣ–ನಿಮ್ಮ ನಾಲ್ಕು ಕೆರೆ ನೀರಿನ ಅನುಭವ ಕೇಳುವುದಕ್ಕೆ ನನಗೂ ಇಷ್ಟ."

"ಒಸಿ ದಿನ ಚೆನ್ನಿ ತಾವ ತನಿಖೆ ಮಾತು ತೆಗೀಬ್ಯಾಡಿ–ಸ್ನೇಹ ಬೆಳಸಿ. ನೀವು ಇಸ್ವಾಸ ಮಡಗಿದ್ದೀರೀಂತ ಅವಳಿಗೆ ಗೊತ್ತಾದ್ರೆ ಪ್ರಾಣಾನೇ ಕೊಡ್ತಾಳೆ."

"ಗಂಡನನ್ನು ಅವಳು ಬಿಟ್ಟುಕೊಡ್ತಾಳೇನ್ರೀ ?"

"ಗಂಡನ ತಲೆ ಕಂಡರೆ ಅವಳಿಗಾಗಾಕಿಲ್ಲ ಬುದ್ಧಿ–ಅವಳಿಗೆ ಬೇಕು ನಿಮ್ಮಂಥ ಚೆಲುವ. ಎಲ್ಡು ಗುಂಡು ಆಕ್ಸಿ, ಅವಳ ಮೈಮ್ಯಾಗೆ ಒಸಿ ಕೈ ಆಡ್ಸಿ–ಭರಮೇಗೌಡ್ನ ಪುರಾಣಾನೆಲ್ಲಾ ಬಿಚ್ಚಿಡ್ತಾಳೆ."

ಎಂದು ಕಿಟಕಿಯಾಚೆ ನೋಡಿ,

"ಬತ್ತಾ ಅವ್ಳೆ ಬುದ್ಧಿ"

ಎಂದು ಒಳಗೆ ಹೋದ.

ಅತ್ತಿತ್ತ ನೋಡಿಕೊಂಡು ಗಾಬರಿಯಿಂದ ಒಳಗೆ ಬಂದ ಚೆನ್ನಿಯನ್ನು ಮೈಲಾರಯ್ಯನೇ ಸ್ವಾಗತಿಸಿ,

"ಹೆದರಿಕೊಳ್ಳಬೇಡ ಚೆನ್ನಿ–ನಾನಿದ್ದೇನೆ" ಎಂದ.

ಹಣೆಯಿಂದಿಳಿಯುತ್ತಿದ್ದ ಬೆವರನ್ನು ತನ್ನ ಸೆರಗಿನ ಕೊನೆಯಿಂದ ಒರಸಿ ಕೊಂಡ ಚೆನ್ನಿ,

"ಆ ರಾಕ್ಷಸನಿಗೆ ತಿಳಿದ್ರೆ ಕೊಂದುಬುಡ್ತಾನೆ ಬುದ್ಧಿ."

"ಅದಕ್ಕೆ ನಾನು ತಕ್ಕ ಬಂದೋಬಸ್ತು ಮಾಡಿದ್ದೀನಿ ಸುಮ್ಮನಿರು. ಗೌಡ ಪಡಖಾನೆ ಹತ್ತಿರ ಬಂದರೆ ದಸ್ತಗೀರ್ ಅವನನ್ನು ಸುಟ್ಟುಬಿಡ್ತಾನೆ."

"ನನ್ನ ಬರೇಳಿದರಂತಲ್ಲಾ ಬುದ್ಧಿ."

"ಹೌದು ಚೆನ್ನಿ–ನಿನ್ನ ಹತ್ತಿರ ಬಹಳ ಮಾತಾಡಬೇಕಾಗಿದೆ."

"ಅವತ್ತು ನಮ್ಮ ಅಟ್ಟೀಗೆ ಬಂದೋರು ತಿರುಗಾ ಬರ್ನೇ ಇಲ್ಲ."

"ಗೌಡನಿಗೆ ಅನುಮಾನ ಬರಬಾರದೂಂತ ಬರ್ಲಿಲ್ಲ."

"ಒಳ್ಳೆದ್ಮಾಡಿದ್ರಿ–ಸೋಮಾರ ಸೋಮಾರ ನಿಮ್ಮನ್ನು ನಾನು ನೋಡ್ತಾ ಇದ್ದೆ ಬುದ್ಧಿ."

"ಎಲ್ಲಿ ?"

"ಇಲ್ಲೇ–ಸಂತೇಗೆ ಬರ್ತಿದ್ದೆ–ನೀವು ಡೂಟಿ ಮಾಡ್ತಿದ್ರಿ."

"ಹೌದು ಚೆನ್ನಿ–ನಾನೂ ಒಂದುಸಲ ನಿನ್ನ ನೋಡಿದೆ. ಮಾತಾಡಿಸ ಬೇಕೆಂದಿದ್ದೆ. ನೋಡಿದವರು ಏನಾದರೂ ಅಂದುಕೊಂಡಾರು ಎಂದು ಸುಮ್ಮನಿದ್ದೆ."

"ದೊಡ್ಡ ಸಾಯೇಬ್ರು ! ನಿಮ್ಗೂ ಭಯಾನ ?"

"ಖಾಕಿ ಬಟ್ಟೆ ಹಾಕಿರೋದರಿಂದ ಭಯಪಡಬೇಕಾಗಿದೆ ಚೆನ್ನಿ."

"ಈ ದಿರ್ಸು (Dress) ನಿಮ್ಗೆ ಭೋ ಒಪ್ತೈತೆ ಬುದ್ಧಿ."

ಅವಳ ಮೆಚ್ಚುಗೆಯ ನುಡಿ ಕೇಳಿ ಪ್ರಸನ್ನವದನನಾದ ಮೈಲಾರಯ್ಯ,

"ಭರಮೇಗೌಡ ನಿನ್ನ ತುಂಬ ಗೋಳು ಹುಯ್ದುಕೊಳ್ಳುತ್ತಾನಂತೆ ನಿಜವೇ ಚೆನ್ನಿ ?"

ಚೆನ್ನಿಯ ಅಂತಃಕರಣ ವೀಣೆಯ ಯಾವುದೋ ತಂತಿ ಮಿಡಿದಂತಾಗಲು ಅವಳು ಕಂಬನಿದುಂಬಿ,

"ನನ್ನ ಅಣೇಬರಕ್ಕೆ ಯಾರು ಒಣೆ ಬುದ್ಧಿ" ಎಂದಳು.

"ನಿನ್ನಂಥ ಹೆಂಗಸಿನ ಜತೆ ಬಾಳ್ವೆ ಮಾಡುವುದಕ್ಕೆ ಅವನಿಗೆ ಪುಣ್ಯ ವಿರಬೇಕು."

"ಅವನ ಮಕ್ಕೆ ಬೆಂಕಿಇಕ್ಕಿದ್ರು–ನಾಯಿ ಅಂಗೆ ಊರ್ನಲ್ಲಿರೋ ಮಕ್ಕಳ್ನೆಲ್ಲಾ ಉಡುಕ್ಕೊಂಡು ಓಗ್ತಾನೆ. ಮನುಸ ಮಾಡೋ ಅನ್ನಾಯಕ್ಕೂ ಕೊನೆ ಬ್ಯಾಡ್ವಾ ಬುದ್ಧಿ -ಕಾಲಕ್ಕೂ ಒಂದೇ ಸಮ್ಕೇ ನಡಿತೈತಾ ?"

"ಕೆಟ್ಟ ದಾರಿ ಬಿಡಿಸಿ ಅವನನ್ನು ಒಳ್ಳೆಯ ದಾರಿಗೆ ತರುವ ಪ್ರಯತ್ನ ನೀನೇಕೆ ಮಾಡಲಿಲ್ಲ ಚೆನ್ನಿ ?"

"ನಾಯಿ ಬಾಲಕ್ಕೆ ದೆಬ್ಬೆ ಕಟ್ಟಿದ್ರೆ ಸರೀ ಓಗ್ತೈತಾ ನನ್ನೊಡೆಯಾ ?

ಕುಲಸ್ಥರ ಮಕ್ಕಳ ಮ್ಯಾಕೆ ಅವನು ಕಣ್ಣು ಮಡಗಿದಾಗ, ನಾನು ಕಾಲಿಗೆ ಬಿದ್ದು ಬೇಡ್ಕೊಂಡೆ. 'ಬೇಡ ಕಣ್ಲಾ–ಹಂಗೆ ಮಾಡಬಾರದು–ಸೋಕಿ ಮಾಡೋ ಹಂಗಿದ್ರೆ ನಾಲ್ಕು ಜನ ಸೂಳೇರ್ನ ಮಡಿಕ್ಕೋ–ನಾನು ಬೇಡ ಅನ್ನಾಕಿಲ್ಲ. ಬದುಕಿ ಬಾಳೋ ಮಕ್ಕಳ್ನ ನಾಸನ ಮಾಡ್ಬ್ಯಾರದು–ದೇವರು ಮೆಚ್ಚಾಕಿಲ್ಲ' ಎಂತಾ ಏಳ್ದೆ. ನನ್ನ ಸಾಯಾಬೀಳಾ ಹೊಡ್ದ ! 'ಬಾಯಿ ಮುಚ್ಕು ಮುಂಡೆ–ನನ್ನಿಷ್ಟ–ಬೇಕಾದ್ದು ಮಾಡಿಕೊಂತೀನಿ !' ಎಂದ."

"ಈಗ ನಿನಗೂ ಅವನಿಗೂ ಹೇಗಿದೆ ?"

"ಅಂಗೇ ಐತೆ. ಎಲ್ಡ್ ಕ್ಕೋ ಮೂರಕ್ಕೊ ಅಟ್ಟೇಗೆ ಬತ್ತಾನೆ–ಬೇಸಿದ್ದನ್ನ ಸುರೀತೀನಿ–ತಿಂದು ಓಗ್ತಾನೆ. ಅವನೂ ಮಾತಾಡಕಿಲ್ಲ–ನಾನೂ ಮಾತಾಡಾಕಿಲ್ಲ."

"ಹೋಗಲಿ ಬಿಡು, ಹೆಚ್ಚು ಘರ್ಷಣೆಗೆ ಅವಕಾಶ ಕೊಡಬೇಡ. ಅವನು ಕೋಪದ ಭರದಲ್ಲಿ ನಿನ್ನ ಕೈಯೋ ಕಾಲೋ ಮುರಿದರೆ ಕಷ್ಟ."

"ನೀವು ಮಾತ್ರ ಅವನ ಕಡೆ ಸೇರ್ಕೋ ಬೇಡಿ ಬುದ್ದಿ."

"ಹಾಗೆಂದರೇನು ಚೆನ್ನಿ !"

"ನಿಮ್ಮ ಹಿಂದಿದ್ದ ಸಾಯೇಬ್ರು–ಸಂಜೀವಪ್ಪ ಗೌಡನ ಕಾಸ್ತಾರರಾಗಿದ್ರು. ಅವನು ಊಯ್ತಿದ್ದ ಕಳ್ಳಭಟ್ಟಿ ಸಾರಾಯ್ಗೆ ನಾಲ್ಗೆ ಚಾಚಿ ಅವನಿಗೆ ಪರೀಕಾಗಿದ್ರು. ಸಾಯೇಬ್ರು ಒಸಿ ಗೌಡನ್ನ ತರಾಟೆಗೆ ತಕ್ಕೊಂಡಿದ್ರೆ ಅವನು ಎಚ್ಚಿಕೊಳ್ತಿರ್ನಿಲ್ಲ."

"ನನಗೂ ಸಂಜೀವಪ್ಪನಿಗೂ ಬಹಳ ವ್ಯತ್ಯಾಸವಿದೆ ಚೆನ್ನಿ–ಕಾಲಾನು ಕಾಲಕ್ಕೆ ನಿನಗೇ ತಿಳಿಯುತ್ತದೆ. ನೋಲೂರಿನ ಪುಂಡು ಪಾಳೆಯಗಾರಿಕೆ ತಪ್ಪಿಸಿ, ಇಲ್ಲಿ ಮರ್ಯಾದಸ್ಥರು ಬದುಕುವ ಹಾಗೆ ಮಾಡಬೇಕೆಂದೇ ನಾನು ಬಂದಿರುವುದು. ಈ ಕೆಲಸ ನನ್ನೊಬ್ಬನಿಂದ ಆಗುವುದಿಲ್ಲ ಚೆನ್ನಿ–ನೀವೆಲ್ಲರೂ ಸಹಾಯ ಮಾಡಿದರೆ ಗೌಡನ್ನ ಮಟ್ಟ ಹಾಕಿಬಿಡ್ತೀನಿ."

"ಅಷ್ಟು ನೀವು ಮಾಡಿ ಬುದ್ದಿ–ನೀವು ಏಳಿದ ಕೆಲ್ಸಾ ಮಾಡೋಕೆ ನಾನು ಸಿದ್ಧವಾಗಿನ್ನಿ."

"ನೀನು ಮನೆಗೆ ಎಷ್ಟು ಹೊತ್ತಿಗೆ ಹೋಗಬೇಕು ಚೆನ್ನಿ ?"

"ಗಂಟೆ ಈಗ ಎಸ್ಟಾಗೈತೆ ?"

"ಎರಡೂಕಾಲು."

"ಒತ್ತು ಮುಳುಗೋ ಒತ್ಗೆ ಓದರಾಯಿತು."

"ಸ್ವಲ್ಪ ಕಾಫಿ ತಿಂಡಿ ತೆಗೆದುಕೊಳ್ಳುತ್ತೀಯಾ ?"

"ಐತಾ ?"

"ಇದೆ–ಪಾಪಣ್ಣ ತರಿಸಿದ್ದಾರೆ."

" ತರಿಸಿ–ತಿನ್ನೋವಾ."

" ಕಾಫಿ ಕುಡೀತೀಯೋ ಇನ್ನೇನಾದರೂ...."

" ಇನ್ನೇನೈತೆ ?"

" ಒಳ್ಳೆ ಬ್ರಾಂದಿ ಇದೆ "

" ದಿಟ ಏಳಿದ್ರೆ ಮುನಿಸ್ಕೊಂತೀರಾ ?"

" ಇಲ್ಲ–ಹೇಳು."

" ನಂಗೆ ಬ್ರಾಂದಿ ಕಂಡ್ರೆ ಪ್ರಾಣ."

ಮೈಲಾರಯ್ಯ ನಸುನಕ್ಕು,

" ನಿನ್ನ ಹತ್ತಿರ ಸುಳ್ಳು, ತಟವಟ ಇಲ್ಲ–ಅದೇ ನನಗೆ ಸಂತೋಷ."

" ತಪ್ಪು ಮಾಡೋರು ಸುಳ್ಳು ಏಳ್ಬೇಕು–ನಾನೇಕೆ ಏಳ್ಲಿ ಬುದ್ಧಿ."

" ನೀನು ತಪ್ಪು ಮಾಡುತ್ತಿಲ್ಲವೇ ?"

" ಇಲ್ಲ."

" ಗೌಡನನ್ನಲ್ಲದೆ ಬೇರೆ...."

" ಗೌಡ ಸರ್‍ಯಾಗಿ ಇದ್ದಿದ್ರೆ ನಾನ್ಯಾಕೆ ಬೇರೆ ಓಗ್ತಿದ್ದೆ."

" ಅದೂ ನಿಜ ಚೆನ್ನಿ. ನಾವು ಎಲ್ಲದಕ್ಕೂ ಹೆಂಗಸರನ್ನೇ ಆಕ್ಷೇಪಿಸುತ್ತೇವೆ. ಅವರಿಗೆ ಕೆಟ್ಟದಾರಿ ತೋರಿಸುವ ಗಂಡಸರನ್ನು ಬಿಟ್ಟುಬಿಡುತ್ತೇನೆ."

" ಎಷ್ಟು ವೈನವಾಗಿ ಮಾತಾಡ್ತೀರಿ ಬುದ್ದಿ" ಎಂದಳು.

ಮೈಲಾರಯ್ಯ ಹೊರಗೆ ಎದ್ದು ಹೋಗಿ ಪಾಪಣ್ಣನಿಗೆ ಸೂಚನೆಕೊಡಲು, ಅವನೇ ತಿಂಡಿಯಿದ್ದ ತಟ್ಟೆಗಳನ್ನೂ, ಮದ್ಯದ ಶೀಷೆ, ಮತ್ತು ಇತರ ಪರಿಕರಗಳನ್ನೂ ತಂದಿಟ್ಟು, ಚೆನ್ನಿಯನ್ನು ನೋಡಿ,

" ಚಂದಾಕಿದ್ದೀಯಾ ಚೆನ್ನಿ" ಎಂದ.

" ಇದ್ದೀನಿ ನೋಡಪ್ಪಾ "

" ಧಣಿಗಳು ಅಪರೂಪಕ್ಕೆ ಬಂದವ್ರೆ ಚೆನ್ನಿ–ಅವರೇ ನಮ್ಮ ಭಾಗದ ದೇವ್ರು. ಅವರ್ನ ಚಂದಾಗಿ ನೋಡಿಕೋ."

ಚೆನ್ನಿ ಮುಗುಳ್ನಗೆ ಬೀರಿ ಕತ್ತು ತಗ್ಗಿಸಿದಳು.

ಪಾಪಣ್ಣ ಹೊರಗೆ ಹೊರಡಲನುವಾಗಿ,

" ನಾನು ಹೊರಗೇ ಇರ್ತೀನಿ ಬುದ್ಧಿ–ಏನು ಬೇಕಾದ್ರೂ ನನ್ನ ಕೂಗಿ."

" ಎಲ್ಲಾ ಕೆಲ್ಸ ನೀವೇ ಮಾಡ್ತಾ ಇದ್ದೀರಲ್ಲಾ ಪಾಪಣ್ಣ."

" ತಮಗೆ ಸಂತೋಸವಾದ್ರೆ ಸಾಕು ಬುದ್ದಿ. ತಮ್ಮಂಥ ಉತ್ತಮರ ಸೇವೆ ದಿನಾ ಸಿಕ್ಕೈತಾ."

ಎಂದು ಬಾಗಿಲು ಮುಂದಕ್ಕೆಳೆದುಕೊಂಡು ಹೊರಗೆ ಹೋದ.

ಚೆನ್ನಿಯೇ ಎರಡು ಗ್ಲಾಸುಗಳಿಗೆ ಬ್ರ್ಯಾಂದಿ ಬಗ್ಗಿಸಿ, ಸೋಡಾ ಬೆರಸಿದಳು. ಅದನ್ನು ದಿಟ್ಟಿಸಿ ನೋಡುತ್ತಿದ್ದ ಮೈಲಾರಯ್ಯ ನಕ್ಕು,

" ಎಲ್ಲಾ ಬರತ್ತೆ" ಎಂದ.

" ನಂಗೆ ಅಭ್ಯಾಸವೈತೇಂತ ಏಳಿದ್ನಲ್ಲಾ !"

" ಅಭ್ಯಾಸ ಮಾಡಿಸಿದವರು ಯಾರು ?"

" ಗೌಡ."

" ಹೇಗೆ ?"

"ನಾನು ಒಸಗೆ ಮಾಡ್ಕೊಂಡಿ ಗಂಡನ ಮನೆಗೆ ಬಂದೆ. ಗೌಡ ದಿನಾ ಇದನ್ನು ತಕ್ಕೊಳ್ಳಿತ್ತಿದ್ದ. ಅವನು ತಕ್ಕೊಳ್ಳೋವಾಗ ನಾನು ಎದುರಿಗೆ ಕುಂತಿರ್ಬೇಕು. ಒಂದಿನ ನನ್ಗೂ ತಕೋ ಅಂದ–ನಾನು ಒಲ್ಲೆ ಎಂದೆ. ಇಡ್ಕೊಂಡು ನನ್ನ ಉಯ್ದ. ಅವನ ಆಘಾತ್ಯಕ್ಕೆ ಒಸಿ ಕುಡಿದೆ–ಮೈ ಎಂಗೆಂಗೋ ಆಯ್ತು–ಜೋರ ಬಂತು ಅಂದ್ಕೊಂಡೆ. ಆಮ್ಯಾಕೆ ಅದೇ ಮಾಮೂಲಾಯಿತು. ಕೆಲವು ದೀಸ ಅವನು ನನ್ನ ಜತೆ ಚಂದಾಕಿದ್ದ–ಆಗ ದಿನಾ ನಾನೂ ಅವನೂ ತಕ್ಕೊಳ್ಳಿತ್ತಿದ್ವಿ."

" ಈಗೇನ್ಮಾಡ್ತೀ ?"

" ದಿನಾ ತಕ್ಕೊಳ್ಳಲ್ಲ. ಒಂದೊಂದು ದೀಸ ಬೇಕು ಅನ್ಸಿದ್ರೆ, ಗಂಗೀನ ಕಳ್ಸಿ ತರಿಸ್ಕೊಂತೀನಿ."

" ಗಂಗಿ ಯಾರು ?"

" ನಮ್ಮ ಊರಿನೋಳು "

" ಅವಳು ನಿನ್ನ ವಿಷಯ ಗೌಡನಿಗೆ ಹೇಳುವುದಿಲ್ಲವೇ ?"

" ಇಲ್ಲ–ಅವಳು ಮೂಗಿ. ಅದೂ ಅಲ್ದೀರಾ ಗೌಡನ ಮೊಕ ಕಂಡರೆ ಅವಳಿಗಾಗದು."

" ನಾನು ನಿಮ್ಮ ಮನೆಗೆ ಬಂದಿದ್ದ ದಿವಸ ಗಂಗಿ ಎಲ್ಲಿದ್ಳು ?"

" ಒಳಗೆ ಅಡಿಗೆ ಬೇಸ್ತಿದ್ಳು "

ಎಂದು ಅವನ ಸಮೀಪಕ್ಕೆ ಸರಿದು,

" ಧಣಿ–ನೀವು ಮಾಂಸ ತಿನ್ನಿತೀರಾ ?" ಎಂದು ಕೇಳಿದಳು.

" ಏಕೆ ?"

" ನಾನು ಪರಮಾಸಿ ಮಾಂಸದಡಿಗೆ ಮಾಡಿ ಕಳಿಸ್ತೀನಿ."

" ಮಾಂಸ ತಿನ್ನುವುದಿಲ್ಲ ಚೆನ್ನಿ–ಮೊಟ್ಟೆ ದೋಸೆ ತಿನ್ನಿತೀನಿ."

" ದಸ್ತಗೀರೂನ ಅಟ್ಟಿ ತಾಕ್ಕೆ ನಾಳೆ ಕಳ್ಸಿ–ವೊಟ್ಟಿ ದೋಸೆ ಮಾಡಿ ಕಳಿಸ್ತೀನಿ."

" ಈಗಲೇ ಬೇಡ ಸುಮ್ಮನಿರು. ನಾನು ಹೇಳಿದಾಗ ಮಾಡಿಸಿ ಕಳುಹಿಸುವೆ ಯಂತೆ."

ಗ್ಲಾಸುಗಳು ಖಾಲಿಯಾಗಲು ವೈಲಾರಯ್ಯನೇ ಎರಡು ಗ್ಲಾಸುಗಳಿಗೂ ' ಬಿಗ್ ಡೋಸ್ ' ಬಗ್ಗಿಸಿದ ; ಚೆನ್ನಿ ಸೋಡಾ ಬೆರಸಿದಳು.

ಎರಡನೆಯ ಗ್ಲಾಸು ಮುಗಿಯುವುದರೊಳಗಾಗಿ ಚೆನ್ನಿ ಮೆಲ್ಲನೆ ವೈಲಾರಯ್ಯನ ಬಳಿಗೆ ಸರಿದು ಅವನ ಗ್ಲಾಸ್ ಕಿತ್ತುಕೊಂಡು, ಕುಡಿದು,

" ನಂಗೆ ಕೊಡ್ದೆ ನೀವೇ ಕುಡೀತೀರಲ್ಲಾ !" ಎಂದಳು.

ಮೂರನೆಯ ನಾರಿ ಗ್ಲಾಸುಗಳು ಭರ್ತಿಯಾಗಲು ಚೆನ್ನಿ ತನ್ನ ಗ್ಲಾಸಿನಿಂದಲೇ ವೈಲಾರಯ್ಯನಿಗೆ ಕುಡಿಸುತ್ತಾ, ಅವನ ಕೆನ್ನೆ ಸವರಿ,

" ಎಷ್ಟು ಚಂದಾಕಿದ್ದೀರಿ ನನ್ನ ದೊರೆ " ಎಂದಳು.

ಗ್ಲಾಸು ಕೆಳಗುರುಳುವುದನ್ನೂ ಲಕ್ಷಿಸದೆ ವೈಲಾರಯ್ಯ ಅವಳನ್ನು ಭರದಿಂದಪ್ಪಿ, ಮತ್ತೆ ಮತ್ತೆ ಚುಂಬಿಸಿದ.

ಒಂದು ಗಂಟೆ ತರುವಾಯ ಎಚ್ಚರಗೊಂಡ ಚೆನ್ನಿ ಎದ್ದು ಕುಳಿತು,

" ಗಂಟೆಯೆಷ್ಟು ?" ಎಂದಳು.

" ನಾಲ್ಕು."

" ಇನ್ನ ನಾನು ಒಲ್ಡಬೇಕು."

" ಹೊತ್ತಿನ್ನೂ ಮುಳುಗಿಲ್ಲ. ಹೋದರಾಯಿತು ಚೆನ್ನಿ."

" ನಂಗೆ ಇನ್ನೊಸಿ ಕುಡಿಯೋಕೆ ಕೊಡಿ."

ಪುನಃ ಗ್ಲಾಸುಗಳಿಗೆ ಬಗ್ಗಿಸಿ, ಅವಳ ಕೈಗೊಂದು ಗ್ಲಾಸ್ ಇತ್ತ ವೈಲಾರಯ್ಯ,

" ನೀನು ಬಹಳ ಕುಡೀತಿ ಚೆನ್ನಿ–ಇಷ್ಟು ಕುಡಿಯಬಾರದು–ವೈಗೊಳ್ಳೆಯ ದಲ್ಲ."

" ಏನೂ ಅನ್ನಬೇಡಿ ದೊರೆ–ನಂಗೆ ಬಲೆ ಕುಸಿಯಾಗ್ತೈತೆ."

" ಪುನಃ ನಿನ್ನನ್ನು ಕಾಣುವುದು ಯಾವಾಗ ಚೆನ್ನಿ ?"

" ನಿಮ್ಮನೇಗೇ ನಾನು ಬರಾಕೆ ಆಗಾಕಿಲ್ವಾ ?"

" ಊರಿನಲ್ಲಿ ಇಷ್ಟು ಉರಿದು ಬೇಯುತ್ತಿರುವಾಗ, ನೀನು ನಮ್ಮ ಮನೆಗೆ ಬಂದರೆ ಮುಗಿದೇ ಹೋಯಿತು."

" ಅಂಗಾದ್ರೆ ಎಲ್ಲಿ–ನೀವೇ ಏಳಿ ?"

" ಎಲ್ಲಿ ಎಂದು ಹೇಳಲಿ ?"

ಎಂದು ಮೈಲಾರಯ್ಯ ಯೋಚಿಸುತ್ತಿರಲು, ಚೆನ್ನಿಯೇ,

" ಸೋಮಾರ ಇಲ್ಲೇ ಬತ್ತೀನಿ–ಮಿಕ್ಕ ದೀಸ ನೀವೇ ನಮ್ಮ ಅಟ್ಟೀಗೆ ಬನ್ನಿ."

" ನಾನು ಪ್ರಾಣ ಮುಡಿಪಾಗಿಟ್ಟೇ ಅಲ್ಲಿಗೆ ಬರಬೇಕು."

" ಭಯವಿಲ್ಲ ದೊರೆ–ರಾತ್ರಿ ಗೌಡ ಮನೆಗೆ ಬರಾಕಿಲ್ಲ–ಅವನಿಗೆ ಜೂಜಿಂದು ಗಲಾಟೆ–ಅಲ್ದೆ ಚಂಜೆಯಾಗತ್ಲೇ ಅವನು ಮೂಗಿನ ಟಂಕಾ ಕುಡ್ದಿರ್ತಾನೆ. ತ್ವಾಟ ಬಿಟ್ಟು ಒರಗೆ ಕಾಲಿಡಾಕಿಲ್ಲ–ನೀವು ಧೈರ್ಯವಾಗಿ ಬನ್ನಿ–ನಾನೂ ಗಂಗಿ ನಿಮ್ಮ ಪರಾಣಕ್ಕೆ ಪರಾಣ ಕೊಡ್ತೀನಿ."

" ನೋಡ್ತೀನಿ ಚೆನ್ನಿ–ನಾನು ಬರೋದಾದ್ರೆ ದಸ್ತಗೀರ್ ಕೈಲಿ ಹೇಳಿ ಕಳಿಸ್ತೀನಿ."

" ಅಂಗೇ ಮಾಡಿ "

ಎಂದು ಮೇಲಕ್ಕೆದ್ದು ಬಟ್ಟೆ ತಲೆಗೂದಲು ಸರಿಪಡಿಸಿಕೊಂಡು,

" ಇನ್ನಾ ಬರಲಾ ?" ಎಂದಳು.

ಅವಳನ್ನಪ್ಪಿ ಮುದ್ದಿಟ್ಟ ಮೈಲಾರಯ್ಯ,

" ತಿರುಗಿ ನಿನ್ನ ನೋಡೋವರೆಗೆ ನನ್ನ ಮನಸ್ಸಿಗೆ ಸಮಾಧಾನವೇ ಇಲ್ಲ ಚೆನ್ನಿ."

" ನಾಳೀಕೆ ಬನ್ನಿ"

ಎಂದು ತಲೆಯ ಮೇಲೆ ಸೆರಗು ಹಾಕಿಕೊಂಡು ಹೊರಬಿದ್ದಳು.

## ೮

ಎರಡು ವಾರ ಕಳೆಯುವಲ್ಲಿ ಮೈಲಾರಯ್ಯ ಚೆನ್ನಿಯರ ವಿಶ್ವಾಸ ದೃಢ ಪಟ್ಟಿತು.

ಚೆನ್ನಿ ಪ್ರತಿ ಸೋಮವಾರ, ಪಾಪಣ್ಣನ ಪಡಖಾನೆಯಲ್ಲಿ ಮೈಲಾರಯ್ಯ ನನ್ನು ಕಾಣುತ್ತಿದ್ದಳು.

ಈ ಮಧ್ಯೆ ಒಂದೊಂದು ದಿನ ರಾತ್ರಿ ಮೈಲಾರಯ್ಯನೇ ಗೌಡನ ಮನೆಗೆ ಹೋಗುತ್ತಿದ್ದ. ಅವನು ಚೆನ್ನಿ ಮನೆಯಿಂದ ಹೊರಬೀಳುವವರೆಗೆ ದಸ್ತಗೀರ್ ಕೈಯಲ್ಲಿ ರಿವಾಲ್ವರ್ ಹಿಡಿದು ಮರೆಯಲ್ಲಿ ನಿಂತು ಕಾವಲು ಕಾಯುತ್ತಿದ್ದ.

ಭರಮೇಗೌಡನ ಬಗ್ಗೆ ಸಾಕಷ್ಟು ವಿಷಯ ಸಂಗ್ರಹ ಮಾಡಿದ್ದ ಮೈಲಾರಯ್ಯ ಹತ್ತಾರು ಜನಗಳಿಂದ ಹೇಳಿಕೆ ಬರೆಸಿಕೊಂಡಿದ್ದ. ಒಂದು ದಿನ ಚೆನ್ನಿಯ ಹೇಳಿಕೆಯನ್ನು ತೆಗೆದುಕೊಂಡು ಅದಕ್ಕೆ ಅವಳ ಎಡಗೈ ಹೆಬ್ಬೆಟ್ಟಿನ ಗುರುತು ಪಡೆದಿದ್ದ.

ಒಂದು ದಿನ ಮೀಸೆ ಹುರಿ ಮಾಡಿ ಊರೊಳಗೆ ಬಂದ ಭರಮೇಗೌಡ ನಂಜೇಗೌಡನ ಮನೆಯ್ಮುಂದೆ ನಿಂತು,

" ನಂಜಾ—ಲೇ ನಂಜಾ "

ಎಂದು ಕೂಗಿದ.

ಅವನ ಆರ್ಭಟೆ ಕೇಳಿ ನಡಗುತ್ತಾ ಹೊರಗೆ ಬಂದ ನಂಜೇಗೌಡ,

" ಏನು ಗೌಡರೇ—ಒಳೀಕೆ ಬನ್ನಿ " ಎಂದ.

" ನಿನ್ನಪ್ಪಾರ ಇರ್ಲೀ ಕಣ್ಲೇ—ನರ್ಸಿ ಎಲ್ಲಲೇ ಬೇವಾರ್ಸಿ ನನ್ಮಗ್ನೇ ?"

" ನಂಟರ ಮನೆಗೆ ಓಗವ್ಳೆ ಗೌಡರೇ."

" ತ್ವಾಟಕ್ಕೆ ಅವಳ್ನ ಕಳಿಸ್ಬೇಕೂಂತ ಗೊತ್ತಿಲ್ವಾ ?"

" ಗೊತ್ತಿತ್ತು. ಏನ್ಮಾಡಲಿ—ನಂಟರು ಬಂದು ಬಲವಂತ ಮಾಡಿ ಕರ್ಕೊಂಡು ಓದ್ರು."

" ಉಣ್ಣಿಮೆ ಟಂಕಾ ಟೇಮ್ (Time) ಕೊಟ್ಟಿವ್ನಿ. ಅಷ್ಟರಾಗೆ ಅವಳ್ನ

ಕರ್ಕೊಂಡು ಬಂದು ತೋಟದಲ್ಲಿ ಒಪ್ಪಿಸಿದ್ಯಾ ಸರೋಯ್ತು. ಇಲ್ದಿದ್ರೆ ಉಣ್ಣೆವೆ ದಿನ ನಿನ್ನ ಮನೇಗೆ ಒಲಕ್ಕೆ ಬೆಂಕಿ ಆಕಿಸ್ತೀನಿ–ಇದ್ನ ಅಟ್ಟೆ ಗೋಡೆ ವ್ಯಾಕೆ ಬರ್ಕ್ಕೋ ?"

ಸ್ತಂಭಿಭೂತನಾಗಿ ನಂಜೇಗೌಡ ನಿಂತಿರಲು, ಮಿಾಸೆ ತೀಡುತ್ತ ಭರಮೇ ಗೌಡ ಮುಂದಡಿಯಿಟ್ಟ.

ಪೋಲೀಸ್ ಸ್ಟೇಷನ್ನಿಗೇ ಬಂದ ಭರಮೇಗೌಡನನ್ನು ಕಂಡು ಅಚ್ಚರಿ ಗೊಂಡ ಸೆಂಟ್ರಿ ಸಿಂಗ್,

"ಇದೇನು ಗೌಡ್ರೆ. ಈಸು ದೂರ ಪಾದ ಬೆಳಸಿದ್ರಿ"

ಎಂದು ಕೇಳಿದ.

"ನಿಮ್ಮ ಇನಿಸ್ಪೇಟ್ರು ಅವರೇನಯ್ಯ ?"

"ಒಳಗವ್ರೆ–ಬನ್ನಿ ಗೌಡ್ರೇ"

ಎಂದು ಸಿಂಗ್ ಅವನನ್ನು ಒಳಗೆ ಕರೆದೊಯ್ದ.

ಸೀಟಿನ ಮೇಲೆ ಕುಳಿತಿದ್ದ ಮೈಲಾರಯ್ಯ ಮೇಲಕ್ಕೇಳದೆ, ಗೌಡನಿಗೆ ಒಂದು ಕುರ್ಚಿ ತೋರಿಸಿದ.

ಗೌಡ ಕುರ್ಚಿಯ ಮೇಲೆ ಕೂಡಲು ಮೈಲಾರಯ್ಯ,

"ಸಿಂಗ್ ಕಾಫೀಗೆ ಹೇಳು. ಹಾಗೇ ಒಂದು ಪ್ಯಾಕು ಗೋಲ್ಡ್‌ಫ್ಲೇಕ್ ಸಿಗರೇಟ್ ತೆಗೆದುಕೊಂಡು ಬಂದು ಕೊಡು. ನೀನು ಹೊರಗೇ ಇರು–ಒಳಕ್ಕೆ ಯಾರನ್ನೂ ಬಿಡಬೇಡ."

ಕಾಫಿ, ಸಿಗರೇಟ್ ಬರುವವರೆಗೆ ಮೈಲಾರಯ್ಯ, ಗೌಡ ಇಬ್ಬರೂ ಉಭ ಶುಭವೆನ್ನಲಿಲ್ಲ.

ಸಿಂಗ್ ಕಾಫಿ ಲೋಟಗಳನ್ನು ತೆಗೆದುಕೊಂಡು ಹೋದ ಮೇಲೆ ಮೈಲಾರಯ್ಯ,

"ಊರೊಳಗೆ ನೀವು ಬಂದದ್ದನ್ನು ಇವತ್ತೇ ನಾನು ನೋಡಿದ್ದು ಗೌಡರೇ."

"ಇವತ್ತು ಒಸಿ ಕೆಲ್ಸಾ ಇತ್ತು ಬಂದಿದ್ದೆ–ನಂಜೇಗೌಡ ಬಾಕಿ ನಿಲ್ಲಿಸಿ ಕೊಂಡವ್ನೆ."

"ಕೊಡ್ತಾನೆ–ಅವನೇನು ಗಾಳಿಗಂತಲು ಆಸಾಮಿಯಲ್ಲ."

"ಅವನು ಬಾಕಿ ಕೊಡದಿದ್ರೆ ನಾನು ಬುಡಬೇಕಲ್ಲ !–ಭರಮೇಗೌಡಂಗೆ ಎಲ್ಡು ಬಗೆದೋರು ಬದುಕ್ತಾರಾ ಇನಿಸ್ಪೇಟ್ರೆ !"

"ಎರಡು ಏಕೆ ಬಗೆಯಬೇಕು ?"

"ಅದ್ನೇ ನಾನು ಕೇಳೋದು."

“ ನಂಜೇಗೌಡ ಎರಡು ಬಗೆದಿದ್ದಾನೆಯೇ ?”

“ ಅವನೂ, ಆ ಈಡಿಗರೋನು, ಎಡ್‌ಮುನಿಷಿಯೋರು ಎಲ್ಲಾ ನನ್ನ ಮ್ಯಾಕೆ ಮಸಲತ್ತು ಮಾಡ್ತವ್ರಂತೆ! ಅವರಿಗೆ ಯಾರೋ ಸಾಯೇಬ್ರು ಬೇರೆ ಷರೀಕಂತೆ !”

“ ಸಾಹೇಬರು ಯಾರೋ ?”

“ ಯಾರೋ ಸರ್‍ಯಾಗಿ ಗೊತ್ತಿಲ್ಲ–ನೀವು ಅಲ್ಲವಲ್ಲ !”

“ ಏನು ಮಾತು ಗೌಡರೇ–ನಾನು ನಿಮ್ಮ ಸ್ನೇಹಿತ ಅಲ್ವೇ ?–ನೀವು ನನಗೆ ಮಾಮೂಲು ಕೊಡ್ತಿಲ್ವೇ ? ನಿಮ್ಮ ಋಣ ತಿಂದು ನಿಮಗೆ ದ್ರೋಹ ಬಗೆದ್ರೆ ದೇವರು ಮೆಚ್ಚುತ್ತಾನೆಯೇ ?”

“ ಒಂದು ಕಿತ ನಾನು ಈಡಿಗರ ಪಾಪಣ್ಣನ ಮೈಮೂಳೆ ಮುರಿಸ್ದೆ–ಅವನು ಉಣ್ಣೋ ಬಾಯಿಗೆ ಮಣ್ಣು ಆಕಿದೆ–ಗೊತ್ತಾ ಇನಿಸ್ಪೇಟ್ರೆ ?”

“ ಗೊತ್ತು.”

“ ಯಾಕೇಂತಾ ಗೊತ್ತಾ ?”

“ ನಿಮಗೇನೋ ಅನ್ಯಾಯ ಮಾಡಿದಾಂತ ಕೇಳ್ದೆ.”

“ ಏನೂ ಇಲ್ಲ–ನನ್ನ ಎಡ್ತೀನ ಮಡಿಕ್ಕೊಂಡಿದ್ದ....”

ಅವನ ನಿರ್ಲಜ್ಜ ನುಡಿ ಕೇಳಿ ಅಸಹ್ಯಪಟ್ಟುಕೊಂಡ ಮೈಲಾರಯ್ಯ,

“ ಆ ಮಾತು ಊರಿನಲ್ಲೆಲ್ಲಾ ನೀವೇ ಡಂಗುರ ಸಾರೋದೇ ಗೌಡರೇ. ನಿಮ್ಮ ಹೆಂಡತಿ ವಿಷಯ ನೀವು ಎತ್ತಿ ಆಡಿದರೆ ಅವಮಾನ ಯಾರಿಗೆ ಯೋಚಿಸಿ.”

“ ಅವಳ್ನ ಎಡ್ತಿ ಅಂದರೆ ಯಾರಾದರೂ ನಕ್ಕೆ ಉಗದಾರು–ಊರ ಅರಾಮಿ, ಅವಳು ನನ್ನ ಎಡ್ತೀನಾ ?”

“ ಹೋಗಲಿ ಬಿಡಿ–ಆ ವಿಷಯ ಬೆಳೆಸುವುದಕ್ಕೆ ಇಷ್ಟವಿಲ್ಲ.”

“ ನಾನು ಏಳದ್ದು ಗ್ಯಪ್ತೀಲಿ ಮಡಿಕ್ಕೊಂಡಿರಿ ಇನಿಸ್ಪೇಟ್ರೆ.”

“ ನನಗೆ ಬೆದರಿಕೆ ಹಾಕ್ತಾ ಇದ್ದೀರಾ ?”

“ ನಿಮ್ದೇನ್ರೀ–ನಿಮ್ಮ ಸಾಹೇಬನ್ನೂ ಬೆದರಿಸ್ಬಲ್ಲೆ.”

“ ಇದು ಪೋಲೀಸ್ ಸ್ಟೇಷನ್ ಗೌಡರೇ–ಬಾಯಿಗೆ ಬಂದಂತೆ ಮಾತಾಡ ಬೇಡಿ. ನಿಮ್ಮ ಮಾತು ಸೆಂಟ್ರಿ (Centry) ಕಿವಿಯ ಮೇಲೆ ಬಿದ್ದರೆ ಅನಾ ಹುತವಾದೀತು !”

“ ಬಿಡ್ರಿ–ಬಿಡ್ರಿ, ನಾ ಕಾಣದ್ದು ನಿಮ್ಮ ಪೋಲೀಸು !”

ಎಂದು ಭರಮೇಗೌಡ ಮೇಲಕ್ಕೆದ್ದು,

“ಬಿರೀನಾ ಈ ಊರು ಬಿಡೋ ಏರ್ಪಾಟು ಮಾಡಿ ಇನಿಸ್ಪೇಟ್ರೇ–ಸೋಲೂರ್ ಅವಾ ನಿಮ್ಮ ಮೈಗೆ ಅಂಟಾಕಿಲ್ಲ”

ಎಂದು ಹೇಳಿ ಹೊರಟುಹೋದ.

ಮೈಲಾರಯ್ಯ ಯೋಚಿಸುತ್ತ ಕುಳಿತ.

ಅರ್ಧ ಗಂಟೆ ಕಳೆದಿರಬಹುದು.

ಅಳುತ್ತ ಒಳಗೆ ಬಂದ ನಂಜೇಗೌಡ ಮೈಲಾರಯ್ಯನ ಪಾದಗಳ ಮೇಲೆ ಬಿದ್ದು,

“ಕಾಪಾಡಿ ಬುದ್ಧಿ–ಉಣ್ಣಿಮೆ ಒಳ್ಗೆ ನರಸೀನ ಒಪ್ಪಿಸ್ದಿದ್ರೆ ಅಟ್ಟಿಗೆ ಬೆಂಕಿ ಮಡಗ್ತೀನೀಂತ ಭರಮೇಗೌಡ ಏಳಿ ಓಗವ್ನೆ” ಎಂದ.

“ಓಹೋ! ಇದೋ ಬಾಕಿ ವಸೂಲಿ–ನನಗೂ ಬೆದರಿಕೆ ಹಾಕಿ ಹೋಗಿದ್ದಾನೆ ನಂಜೇಗೌಡ.”

“ಏನ್ಮಾಡ್ಲಿ ಬುದ್ಧಿ.”

ಮೈಲಾರಯ್ಯನ ಮುಖ ಗಂಟಿಕ್ಕಿತು.

ಮನಸ್ಸಿನಲ್ಲೇ ಒಂದು ನಿರ್ಧಾರಕ್ಕೆ ಬಂದಿದ್ದ ಮೈಲಾರಯ್ಯ,

“ಈಗ ನರಸಿ ಎಲ್ಲಿದ್ದಾಳೆ ನಂಜೇಗೌಡ.”

“ಕುಣಿಗಲ್‌ನಲ್ಲಿ ನಂಟರ ಮನೇಲಿದ್ದಾಳೆ.”

“ನಾಳೆಯೇ ಅವಳನ್ನು ಇಲ್ಲಿಗೆ ಬರಮಾಡು.”

“ಬುದ್ಧೀ........”

“ನಾನು ಇರುವಾಗ ನಿನಗೇನು ಭಯ–ನೀನು ಬರಮಾಡು.”

“ಅವಳ್ನ ಎಲ್ಲಿ ಮಡಗ್ಲಿ.”

“ನಿನ್ನ ಮನೆಯಲ್ಲೇ ಇಟ್ಟುಕೊಂಡು ಭರಮೇಗೌಡನಿಗೆ ಹೇಳಿ ಕಳಿಸು.”

“ಇವತ್ತೇ ಆಳು ಕಳಿಸ್ತೀನಿ–ನಾಳೆ ಮಗ ಬತ್ತೈತೆ.”

“ಬರಲಿ. ಅವಳು ಬಂದ ಕೂಡಲೆ ನನಗೆ ಬಂದು ತಿಳಿಸು”

ಎಂದವನನ್ನು ಕಳಿಸಿಕೊಟ್ಟು, ದಸ್ತಗೀರನನ್ನು ಕರೆದು, ಎ. ಎಸ್. ಪಿ ಸಾಹೇಬರಿಗೆ ಕಾಗದ ಬರೆದು,

“ದಸ್ತಗೀರ್–ನೀನು ಈಗ್ಲೇ ಬೆಂಗಳೂರಿಗೆ ಹೋಗಿ ಎ. ಎಸ್. ಪಿ ಸಾಹೇಬರು ಎಲ್ಲಿದ್ದರೂ ಪತ್ತೆಮಾಡಿ ಈ ಕಾಗದ ಕೊಟ್ಟು ಅವರ ಜವಾಬು ತೆಗೆದುಕೊಂಡು ಬಾ” ಎಂದ.

ದಸ್ತಗೀರ್ ಕಾಗದ ತೆಗೆದುಕೊಂಡು ಹೊರಗೆ ಹೋಗಲು ಅನುಮಾನಿಸಲು,

" ಇನ್ನೇನು ?"

" ಒಂದು ಅರಿಕೆ ಐತೆ ಸರ್ಕಾರ್."

" ಬೇಗ ಹೇಳು."

" ನಾನು ಬರೋಟಂಕಾ, ಬರಮೇಗೌಡ್ನ ಅಟ್ಟೀಗೆ ಸರ್ಕಾರ್ ಹೋಗ ಕೂಡದು."

" ಹಾಗೇ ಆಗಲಿ–ಹೋಗು "

ಎಂದು ಮೈಲಾರಯ್ಯ ನಸುನಗುತ್ತ ನುಡಿದ.

೬

ಮಾರನೆಯ ದಿನ ದಸ್ತಗೀರ್ ಎ. ಎಸ್. ಪಿ. ಸಾಹೇಬರ ಉತ್ತರ ತೆಗೆದುಕೊಂಡು ಹಿಂದಿರುಗಿದ.

ನರಸಿ ಇನ್ನೂ ಬರದಿರಲು ನಂಜೇಗೌಡನೇ ಅವಳನ್ನು ಕರೆತರಲು ಕುಣಿಗಲ್ಲಿಗೆ ಹೋದ.

ಮಾರನೆಯ ದಿನ ಹಿಂದಿರುಗಿದ ನಂಜೇಗೌಡ, ಸ್ಟೇಷನ್ನಿಗೆ ಬಂದು ಪೈಲಾರಯ್ಯನಿಗೆ,

" ನರಸಿ ಕರ್‍ಕೊಂಡು ಬಂದಿವ್ನಿ ಬುದ್ಧಿ " ಎಂದ.

" ಒಳ್ಳೆಯದು–ನರಸಿ ಊರಿಗೆ ಬಂದಿದ್ದಾಳೆ–ನೀನೇ ಬಂದು ಕರೆದು ಕೊಂಡು ಹೋಗಬಹುದು ಎಂದು ಭರಮೇಗೌಡನಿಗೆ ಹೇಳಿಕಳಿಸು."

ನಂಜೇಗೌಡ ತನ್ನ ಆಳಿನ ಸಂಗಡ ಭರಮೇಗೌಡನಿಗೆ ಸುದ್ದಿ ಮುಟ್ಟಿಸಿದ.

ಆಳು ಹೇಳಿದ ಸಂಗತಿ ಕೇಳಿ ಕೋಪಾವಿಷ್ಟನಾದ ಭರಮೇಗೌಡ,

" ಈ ನನ್ಮಗನ್ಗೆ ಇಷ್ಟು ಧೈರ್ಯ ಬಂತಾ–ಇರ್‍ಲಿ ನೋಡ್ತೀನಿ "

ಎಂದು ತನ್ನ ಪಡೆಯೊಂದಿಗೆ ನೇರವಾಗಿ ನಂಜೇಗೌಡನ ಮನೆಗೆ ಬಂದು, ಬಾಗಿಲಿನಲ್ಲಿ ನಿಂತು,

" ಕರ್‍ಕೊಂಡು ಬಾರ್‍ಲೇ ಗೌಡಾ–ನರಸೀನಾ "

ಎಂದು ಕೂಗಿದ.

ರಿವಾಲ್ವರ್ ಕೈಯಲ್ಲಿ ಹಿಡಿದು ಒಳಗಿನಿಂದ ಬಂದ ಪೈಲಾರಯ್ಯ,

" ನರಸೀ ಬರಲ್ಲ ಗೌಡರೇ–ನೀವೇ ಒಳಗೆ ಬಂದು ಅವಳನ್ನು ಕರೆದು ಕೊಂಡು ಹೋಗಿ " ಎಂದ.

ಕ್ಷಣಕಾಲ ಅವಾಕ್ಕಾದ ಭರಮೇಗೌಡ,

" ಇದೆಲ್ಲಾ ನಿನ್ನ ಮಸಲತ್ತೋ ಇನಿಸ್ಪೇಟರ್–ಇರಲಿ ನನ್ಮಗನೇ–ನಿನ್ನ ಆಮ್ಯಾಕೆ ಇಚಾರಿಸ್ಕೊಂತೀನಿ "

ಎಂದು ತನ್ನ ಅನುಯಾಯಿಗಳ ಕಡೆ ನೋಡಿ,

" ಏನು ನೋಡ್ತೀರ್ಲೇ–ಒಳಗೆ ನುಗ್ಗಿ " ಎಂದ.

ಭರಮೇಗೌಡನ ಅನುಯಾಯಿಗಳು ಒಳಗೆ ನುಗ್ಗಲೆತ್ನಿಸಲು, ಒಳಗಿನಿಂದ ಬಂದೂಕು ಹಿಡಿದ ಆರು ಜನ ಕಾನಿಸ್ಟೇಬಲ್‌ಗಳು ಹೊರಗೆ ಬಂದು ಬಾಗಿಲಿಗೆ ಅಡ್ಡವಾಗಿ ನಿಂತರು.

ಗೌಡನ ಅನುಯಾಯಿಗಳಿಗೂ ಕಾನಿಸ್ಟೇಬಲ್‌ಗಳಿಗೂ ಘರ್ಷಣೆಯಾಯಿತು.

ನಂಜೇಗೌಡನ ಮನೆಯ ಸುತ್ತ ಅಡಗಿ ಕುಳಿತಿದ್ದ ದಸ್ತಗೀರ್, ಮತ್ತಿತರ ಕಾನಿಸ್ಟೇಬಲ್‌ಗಳು ಹಿಂದಿನಿಂದ ಬಂದು ಭರಮೇಗೌಡನನ್ನೂ ಅವನ ಅನುಯಾಯಿಗಳನ್ನೂ ಮುತ್ತಿ ಅವರ ಕೈಗಳಿಂದ ದೊಣ್ಣೆಗಳನ್ನು ಕಸಿದುಕೊಂಡರು.

ಭರಮೇಗೌಡನಿಗೆ ದಿಕ್ಕೇ ತೋರದಂತಾಯಿತು.

ದಸ್ತಗೀರ್ ಅವರೆಲ್ಲರ ಕೈಗೆ ಕೋಳಗಳನ್ನು ತೊಡಿಸಿದ.

ಈ ವೇಳೆಗೆ ಊರಿಗೆ ಊರೇ ನಂಜೇಗೌಡನ ಮನೆಯ ಮುಂದೆ ಜಾತ್ರೆ ಸೇರಿತ್ತು.

ಮೈಲಾರಯ್ಯ ಗಟ್ಟಿಯಾಗಿ,

" ನರಸೀ " ಎಂದು ಕೂಗಿದ.

ಗಡಗಡ ನಡುಗುತ್ತಿದ್ದ ನರಸಿಯ ಕೈಹಿಡಿದು ನಂಜೇಗೌಡ ಕರೆತಂದು ಮೈಲಾರಯ್ಯನ ಮುಂದೆ ನಿಲ್ಲಿಸಲು ಮೈಲಾರಯ್ಯ,

" ಹೆದರಬೇಡ ನರಸೀ–ನಾನು ಹೇಳುವುದನ್ನು ಧೈರ್ಯವಾಗಿ ಮಾಡು " ಎಂದ.

ನರಸಿ ತುಸು ಕತ್ತೆತ್ತಿ ನೋಡಿ, ಕತ್ತು ತಗ್ಗಿಸಿದಳು.

" ಅಲ್ಲಿ ನೋಡು ನರಸಿ–ನಿಮ್ಮಪ್ಪನ ಮೆಟ್ಟು, ಅದನ್ನು ತೆಗೆದುಕೊಂಡು, ನಿನ್ನ ಮನಸ್ಸು ಬಂದಷ್ಟು ಭರಮೇಗೌಡನನ್ನು ಹೊಡಿ."

ನರಸಿ ಮೌನವಾಗಿ ನಿಂತಿರಲು ಕೆರಳಿದ ಮೈಲಾರಯ್ಯ,

" ನಾನು ಹೇಳಿದ ಹಾಗೆ ಕೇಳದಿದ್ದರೆ ನಿನಗೆ ಒದೆ ಬೀಳುತ್ತದೆ ನೋಡು " ಎಂದ.

ಜಗುಲಿಯ ಮೇಲಿದ್ದ ಮೆಟ್ಟನ್ನು ಯಾರೋ ತಂದು ನರಸಿಯ ಕೈಗಿತ್ತರು.

ನರಸಿ ಅನುಮಾನಿಸುತ್ತ ನಿಂತಳು.

ಈ ದೃಶ್ಯ ನೋಡುತ್ತಿದ್ದ ಜನಜಂಗುಳಿ,

" ಹೊಡಿ ನರಸಿ–ಹೆದರಬೇಡ " ಎಂದರು.

ಅವರ ವೀರಘೋಷದಿಂದ ಹುರಿಗೊಂಡ ನರಸಿ. ಮೆಟ್ಟಿನಿಂದ ಭರಮೇ ಗೌಡನ ಮುಖಕ್ಕೆ ನಾಲ್ಕು ಪೆಟ್ಟುಕೊಟ್ಟಳು.

ಜನಸಂದಣಿ ತಮ್ಮ ಚಪ್ಪಲಿಗಳಿಂದ ಭರಮೇಗೌಡನನ್ನು ಥಳಿಸಿದರು.

ಗೌಡನ ಮುಖದಿಂದ ಬೆವರು, ರಕ್ತ ಹರಿಯಲಾರಂಭಿಸಿದವು.

" ಇವರನ್ನೆಲ್ಲಾ ಸ್ಟೇಷನ್ನಿಗೆ ಕರ್‍ಕೊಂಡು ಹೋಗಿ, ಲಾಕಪ್ ಸೇರಿಸು ದಸ್ತಗೀರ್ "

ಎಂದು ಮೈಲಾರಯ್ಯ ಆಜ್ಞೆ ವಿಧಿಸಲು, ಕುರಿಗಳನ್ನಟ್ಟಿಕೊಂಡು ಹೋಗು ವಂತೆ ಪೋಲೀಸಿನವರು ಭರಮೇಗೌಡನನ್ನೂ ಅವನ ಅನುಯಾಯಿಗಳನ್ನೂ ಅಟ್ಟಿಕೊಂಡು ಹೋದರು.

ಊರಿಗೆ ಊರೇ ಮೈಲಾರಯ್ಯನನ್ನು ಕೊಂಡಾಡಿ ಧನ್ಯವಾದ ಅರ್ಪಿಸಿತು.

ಭರಮೇಗೌಡ ಮತ್ತು ಅವನ ಅನುಯಾಯಿಗಳ ಮೇಲೆ ಲೈಸನ್ಸ್ ಪಡೆಯದೆ ದ್ಯೂತಗೃಹ ನಡಸಿದ ಆಪಾದನೆ. ಕಳ್ಳಭಟ್ಟಿ ಸಾರಾಯಿ ತಯಾರು ಮಾಡುತ್ತಿದ್ದ ಆಪಾದನೆ ಹೊರೆಸಲ್ಪಟ್ಟಿತು. ಶಿಕ್ಷೆ ಸ್ವತಃಸಿದ್ಧವಾಗಿದ್ದುದರಿಂದ ಮೈಲಾರಯ್ಯ ಅವನ ಮೇಲೆ ಖೂನಿ ಆಪಾದನೆ ಹೊರೆಸಲಿಲ್ಲ.

ವಿಚಾರಣೆಯಾಗಿ ಭರಮೇಗೌಡನಿಗೆ ಎರಡು ವರ್ಷ ಸಶ್ರಮ ಶಿಕ್ಷೆ ಮತ್ತು ಮೂರು ಸಾವಿರ ರೂಪಾಯಿ ದಂಡ, ಅವನ ಅನುಯಾಯಿಗಳಿಗೆ ಒಂದು ವರ್ಷ ಸಾದಾ ಶಿಕ್ಷೆ ವಿಧಿಸಲಾಯಿತು. ಭರಮೇಗೌಡನಿಗೆ ಪರೀಕಾಗಿದ್ದ ಇನ್ಸ್‌ಪೆಕ್ಟರ್ ಸಂಜೀವಯ್ಯನಿಗೆ ಬರ್ತರ್ಫ್ ಆಗಿ, ಆಗುಂಬೆಗೆ ಸಬ್ ಇನ್ಸ್‌ಪೆಕ್ಟರಾಗಿ ವರ್ಗ ವಾಯಿತು.

ಸೋಲೂರು ಮೊಕದ್ದಮೆ ಮೈಲಾರಯ್ಯನ ಕೀರ್ತಿಯನ್ನು ವಿಸ್ತರಿಸಿದು ದಲ್ಲದೆ ಸಂಬಳದ ಬಡ್ತಿಯನ್ನೂ ದೊರಕಿಸಿತು. ಅವನ ಸಾಹಸವನ್ನು ಮೆಚ್ಚಿ ಕೊಂಡ ಡಿ. ಐ. ಜಿ ಸಾಹೇಬರು ' ರಾಷ್ಟ್ರಪತಿ ಪದಕ 'ವನ್ನು ಮೈಲಾರಯ್ಯನಿಗೆ ಕೊಡಿಸಲು ನಿರ್ಧರಿಸಿದರು.

ವೆಂಕಣ್ಣನವರ ಆನಂದಕ್ಕೆ ಪಾರವೇ ಇಲ್ಲವಾಯಿತು.

ಮೈಲಾರಯ್ಯನ ಗೌರವಾರ್ಥ ಭಾರಿ ಔತಣವನ್ನೇರ್ಪಡಿಸಿ,

" ನಮ್ಮ ಭಾಗದ ದೇವರ ಹಾಗೆ ಬಂದು ನಮ್ಮನ್ನು ಕಾಪಾಡಿದಿರಿ. ನಿಮ್ಮ ಉಪಕಾರ ಹೇಗೆ ತೀರಿಸಬೇಕೋ ಕಾಣೆ " ಎಂದರು.

" ಉಪಕಾರವೇನು ಬಂತು ವೆಂಕಣ್ಣನವರೇ. ನನ್ನ ಕರ್ತವ್ಯ ನಾನು ನಿರ್ವಹಿಸಿದೆ."

" ಈಗಲೇ ಬೆಂಗಳೂರಿಗೆ ಹೊರಟುಹೋಗುವಿರಾ ?"

" ಇಲ್ಲ. ಇನ್ನೂ ಕೆಲವು ದಿನ ನಾನು ಇಲ್ಲಿಯೇ ಇದ್ದು ಯಾವ ಪ್ರತಿಕ್ರಿಯೆಯೂ ಆಗದಂತೆ ನೋಡಿಕೊಳ್ಳಬೇಕೆಂದು ಸಾಹೇಬರು ಅಪ್ಪಣೆ ಮಾಡಿದ್ದಾರೆ."

" ಬಹಳ ಸಂತೋಷ " ಎಂದರು.

ಅದೇ ರಾತ್ರಿ ಮನೆಗೆ ಬಂದ ಮೈಲಾರಯ್ಯನನ್ನು ನೋಡಿ, ತುಸು ಮುನಿಸುಗೊಂಡ ಚೆನ್ನಿ,

" ಸಾಯೇಬ್ರಿಗೆ ಈಗ ನೆಪ್ಪು ಬಂತೇನೋ ?" ಎಂದಳು.

" ಕೈತುಂಬ ಕೆಲಸವಿತ್ತು ಚೆನ್ನಿ–ಇತ್ತ ಬರಲಾಗಲಿಲ್ಲ."

" ಊರಿಗೆ ಒಲ್ಟು ಓಗ್ತೀರಾ ?"

" ಇಲ್ಲ–ಇನ್ನೂ ಕೆಲವು ತಿಂಗಳು ಇಲ್ಲೇ ಇರುತ್ತೇನೆ. ನಿನ್ನ ಗೌಡನ ಕಡೆಯವರು ಮತ್ತೆ ಕಿತಾಪತಿ ಮಾಡದಂತೆ ನೋಡಿಕೊಳ್ಳಬೇಕಾಗಿದೆ."

ಚೆನ್ನಿಯ ಮನಸ್ಸಿನಲ್ಲಿದ್ದ ದೊಡ್ಡ ದುಗುಡ ಪರಿಹಾರವಾದಂತಾಯಿತು.

" ಬೆಂಗಳೂರಿಗೆ ಹೋಗಿ ಗೌಡನ್ನ ನೋಡಿಕೊಂಡು ಬರಲ್ಲವೇ ಚೆನ್ನಿ ?"

" ಅವ್ನ ಕೆಟ್ಟಮೂತಿ ನಾನ್ಯಾಕೆ ನೋಡಲಿ."

" ಎಷ್ಟಾದರೂ ಗೌಡ ನಿನ್ನ ಗಂಡ."

" ಗಂಡನ್ನ ಗುಂಡಿಗಿಕ್ಕಿದ ದಿನ ನಂಗೆ ನಿರುಂಬಲವಾಗ್ತೈತೆ."

" ಎರಡು ವರ್ಷ ಕಳೆದ ಮೇಲೆ ಅವನು ಇಲ್ಲಿಗೆ ಹಿಂದಿರುಗುತ್ತಾನೆ– ಆಗವನು ನಿನ್ನ ಸುಮ್ಮನೆ ಬಿಡುತ್ತಾನೆಯೇ ?"

" ಇನ್ನೇನ್ಮಾಡ್ತಾನೆ ಬುಡಿ ಬುದ್ಧಿ–ನರಸೀ ಕೈಲಿ ಮೆಟ್ಟಿನಲ್ಲಿ ವದೆ ಬಿದ್ದಾಗಲೇ ಅವನ ಪೊಗರು ಅಡಗೋಯ್ತು–ನನ್ನ ಏನ್ಮಾಡ್ತೀರಿ ?"

" ಏನು ಮಾಡಬೇಕು."

" ಒಸಿ ದಿನ ಬುಟ್ಟು ನೀವು ಒಂಟುಓದ್ರೆ ನನ್ನ ಗತಿ ?"

" ಆಗಾಗ್ಗೆ ಬಂದು ನಿನ್ನ ನೋಡಿಕೊಂಡು ಹೋಗ್ತೀನಿ."

" ಊಹೂ–ನೀವು ಎಲ್ಲಿರ್ತೀರಿ ಅಲ್ಲೀಗೆ ನಾನೂ ಬತ್ತೀನಿ."

" ಸದ್ಯ–ಅಂಥ ಕೆಲಸ ಮಾಡೀಯಾ–ನನ್ನ ಕೆಲಸದ ಬಾಯಿಗೇ ಮಣ್ಣು ಬೀಳತ್ತೆ."

" ನಿಮ್ಮ ಸಂಸಾರ ಇಲ್ಲೀಗೆ ಕರಸ್ಕೊಂತೀರಾ ?"

" ಕರಸಿಕೊಳ್ಳಬೇಕು–ಸ್ಪೆಷಲ್ ಡ್ಯೂಟಿ ಮೇಲೆ ನಾನು ಬಂದಿದ್ದುದರಿಂದ ಸಂಸಾರ ಕರಸಿಕೊಳ್ಳಲಿಲ್ಲ. ಈಗ ಇಲ್ಲೇ ಇರುವುದು ನಿಶ್ಚಯವಾದ ಮೇಲೆ ಸಂಸಾರ ಬಿಟ್ಟಿರುವುದಕ್ಕಾಗುತ್ತದೆಯೇ ?"

" ನನ್ನ ಮರ್‍ತು ಬುಡ್ತೀರೇನೋ ?"

" ಇಲ್ಲ ಚೆನ್ನಿ–ನಿನ್ನ ಮರೆಯಲ್ಲ–ನಿನ್ನ ಉಪಕಾರ ಮರೆತರೆ ದೇವರು ಮೆಚ್ಚುತ್ತಾನೆಯೇ ?"

ಎಂದು ಹಾರ್ದಿಕವಾಗಿ ನುಡಿದ.

# ೧೦

ತಮ್ಮ ಮನೆಯ ಸಮೀಪದಲ್ಲಿದ್ದ ಒಂದು ಮನೆಯನ್ನು ವೆಂಕಣ್ಣನವರು ಮೈಲಾರಯ್ಯನಿಗೆ ಗೊತ್ತುಮಾಡಿಕೊಟ್ಟರು.

ಅಂಬಮ್ಮನವರೇ ನಿಂತುಕೊಂಡು ಮನೆ ಅಚ್ಚುಗಟ್ಟು ಮಾಡಿಸಿದರು.

ಒಂದು ಭಾನುವಾರ ಮೈಲಾರಯ್ಯ ಬೆಂಗಳೂರಿಗೆ ಹೋಗಿ, ಹೆಂಡತಿಯನ್ನು ಕರೆದುಕೊಂಡು ಬಂದ.

ಅಂಬಮ್ಮ ಜಾನಕಿಯನ್ನು ಸ್ವಂತ ಮಗಳಂತೆ ಪರಿಗಣಿಸಲಾರಂಭಿಸಿದರು. ಸುಭದ್ರನಂತೂ ಜಾನಕಿಗೆ ಗಂಟೇ ಬಿದ್ದಳು.

ಒಂದ ದಿನ ಸುಭದ್ರನಿಗೆ ಜಾನಕಿಯೇ ತಲೆಬಾಚಿ ಜಡೆ ಹೆಣೆಯುತ್ತಿದ್ದಳು. ಅಂಬಮ್ಮ ಅವರೆದುರು ಕುಳಿತು ಹೂ ಕಟ್ಟುತ್ತಿದ್ದರು.

ಜಡೆ ಹೆಣೆದುದು ಮುಗಿಯಲು, ಜಾನಕಿ ಅವಳ ಮುಂದಲೆ ಬಾಚುತ್ತಾ,

" ಒಳ್ಳೇ ಗಂಡು ಗೊತ್ತುಮಾಡಿ ಸುಭದ್ರನಿಗೆ ಬೇಗ ಮದುವೆ ಮಾಡಿಬಿಡಬೇಕು ಅಂಬಮ್ಮನವರೇ " ಎಂದಳು.

" ಹೌದಮ್ಮ ಹೌದು. ಅಣಿಯಾದ ಗಂಡು ಸಿಕ್ಕಬೇಕಲ್ಲ !"

" ಪ್ರಯತ್ನ ನಡೆದಿದೆಯೇ ?"

" ಉಗಾದಿ ಕಳೆದ ಮೇಲೆ ಒಂದು ತಿಂಗಳು ರಜಾ ತೆಗೆದುಕೊಂಡು ಗಂಡು ಹುಡುಕುವುದಕ್ಕೆ ಅವರು ಹೋಗಬೇಕೆಂದಿದ್ದಾರೆ.—ನಿನಗೆ ಯಾರಾದರೂ ಗೊತ್ತಿದ್ದರೆ ಹೇಳು ಜಾನಕಿ."

" ಈ ವಿಷಯ ವೆಂಕಣ್ಣನವರು ನನ್ನ ಯಜಮಾನರ ಹತ್ತಿರ ಪ್ರಸ್ತಾಪಿಸಲಿಲ್ಲವೇ ?"

" ಇಲ್ಲ—ಇಷ್ಟು ದಿನವೂ ಈ ಭರಮೇಗೌಡನ ಪುರಾಣವೇ ಆಯಿತು—ಈಗತಾನೆ ಅವರಿಗೂ ಬಿಡುವು."

" ಅವರ ತಮ್ಮ ಒಬ್ಬ ವರ ಇದ್ದಾನ್ರೀ—ಕಾಲೇಜಿನಲ್ಲಿ ಓದ್ತಾ ಇದ್ದಾನೆ.

ಕಾಲೇಜಿನ ಆಟಪಾಟಗಳಲ್ಲೆಲ್ಲಾ ಮುಂದಿದ್ದಾನೆ ಶಾಮುನನ್ನು ಅವರೂ ನಾನೂ ಬೆಳಸಿದ್ದೇವೆ ನಮ್ಮ ಮಾತು ಅವನು ಮೀರುವುದಿಲ್ಲ ಎನ್ನುವ ನಂಬಿಕೆಯಿದೆ."

"ಮನೆಯಲ್ಲೆ ಬೆಣ್ಣೆ ಇಟ್ಟುಕೊಂಡು, ಊರಲ್ಲೆಲ್ಲಾ ತುಪ್ಪಕ್ಕೆ ಅಲೆದನಲ್ಲೇ ಜಾನಕಿ–ಹೇಗಾದರೂ ಮಾಡಿ ಈ ಸಂಬಂಧ ಕುದುರಿಸಿ ಪುಣ್ಯ ಕಟ್ಟಿಕೊಳ್ಳಮ್ಮ."

"ವೆಂಕಣ್ಣನವರಿಗೆ ಹೇಳಿ ನೀವು ನಮ್ಮನೆಯವರ ಹತ್ತಿರ ಈ ವಿಷಯ ಪ್ರಸ್ತಾಪಿಸಿ–ಉಳಿದ ಕೆಲಸ ನಾನು ಮಾಡುತ್ತೇನೆ."

"ಹುಡುಗ ಏನು ಮಾಡುತ್ತಿದ್ದಾನೆಂದೆ ?"

"ಬಿ. ಎ. ಕ್ಲಾಸಿನಲ್ಲಿ ಓದ್ತಾ ಇದ್ದಾನೆ."

"ಒಂದು ದಿನದ ಮಟ್ಟಿಗೆ ಅವನನ್ನು ಕರೆಸುತ್ತೀಯಾ ?"

"ಇನ್ನೇನು ಕ್ರಿಸ್‌ಮಸ್ ರಜಾ ಷುರುವಾಗುತ್ತದೆ. ಅವನೇ ಬರ್ತಾನೆ."

"ಈಗ ಗಂಡು ಗೊತ್ತಾದರೆ ವೈಶಾಖದಲ್ಲಿ ಮದುವೆ ಮಾಡಿ ಮುಗಿಸಿ ಬಿಡುತ್ತೇನೆ ಕಣೋ."

"ಹಾಗೇ ಮಾಡಿ. ಶಾಮುನ ಪರೀಕ್ಷೆ ಮುಗಿದ ಮೇಲೆ ಅವನಿಗೆ ಮದುವೆ ಮಾಡಿಬಿಡಬೇಕು ಎಂದು ಅವರೂ ಹೇಳುತ್ತಿದ್ದರು."

"ಹುಡುಗನ ಜಾತಕ ಇದ್ದರೆ ಕೊಡು."

"ಎಲ್ಲೋ ಇಟ್ಟದ್ದೀನಿ. ಹುಡುಕಿ ನಾಳೆ ಕೊಡುತ್ತೇನೆ"

ಎಂದಳು.

ಅಂಬಮ್ಮನವರು ತಂದ ಒಳ್ಳೆಯ ಸುದ್ದಿ ಕೇಳಿ ವೆಂಕಣ್ಣನವರು ಸಂತೋಷಗೊಂಡು,

"ಜಾತಕಾನುಕೂಲ ನೋಡಿಕೊಂಡು ಮೈಲಾರಯ್ಯನವರ ಜತೆ ಮಾತಾಡುತ್ತೇನೆ ಅಂಬಾ" ಎಂದರು

ವೆಂಕಣ್ಣನವರೇ ಜಾತಕ ಪರೀಕ್ಷೆಯಲ್ಲಿ ಗಟ್ಟಿಗರಾಗಿದ್ದುದರಿಂದ ಅವರೇ ಶಾಮು, ಸುಭದ್ರೆಯ ಜಾತಕಗಳನ್ನು ಪರೀಕ್ಷಿಸಿ ನೋಡಿ,

"ಜಾತಕಾನುಕೂಲ ಚೆನ್ನಾಗಿದೆ. ಆದರೆ ಷಷ್ಠಾಷ್ಟಕವಿದೆ–ಶಾಂತಿ ಮಾಡಿದರೆ ಈ ದೋಷ ಪರಿಹಾರವಾಗುತ್ತದೆ"

ಎಂದು ಹೆಂಡತಿಗೆ ತಿಳಿಸಿದರು.

ಒಂದು ದಿನ ಸ್ಟೇಷನ್ ಡ್ಯೂಟಿ ಮುಗಿಸಿಕೊಂಡು ಬಂದ ಮೈಲಾರಯ್ಯನೊಂದಿಗೆ ಲೋಕಾಭಿರಾಮವಾಗಿ ಮಾತಾಡುತ್ತಾ, ವೆಂಕಣ್ಣನವರು, ಶಾಮುನ ವಿಷಯ ಪ್ರಸ್ತಾಪಿಸಿ,

" ಹೆಂಗಸರು ಜಾತಕ ತಂದುಕೊಟ್ಟಿರು. ನಾನೇ ನೋಡಿದ್ದೇನೆ. ಗೃಹ ಮೈತ್ರಿ ಚೆನ್ನಾಗಿದೆ. ನೀವು ದೊಡ್ಡ ಮನಸ್ಸು ಮಾಡಿದರೆ ನಾನು ಧನ್ಯನಾಗುತ್ತೇನೆ " ಎಂದರು.

ಮೈಲಾರಯ್ಯ ನಗುತ್ತಾ,

" ಜಾನಕಿ ಆಗಲೇ ಹೆಚ್ಚಿಬಿಟ್ಟಿದ್ದಾಳೆ " ಎಂದ.

" ಪರೀಕ್ಷೆ ಮುಗಿದ ಮೇಲೆ ತಮ್ಮನಿಗೆ ನೀವು ಮದುವೆ ಮಾಡಬೇಕೆಂದಿದ್ದೀರೆಂದು ಕೇಳಿದೆ."

" ಅದೂ ಜಾನಕಿಯ ಯೋಚನೆ ವೆಂಕಣ್ಣನವರೇ–ಶಾಮುನನ್ನು ಸಾಕಿ ಸಲಹಿದವಳೇ ಅವಳು ಅವನು ನನಗೆ ತಮ್ಮನೂ ಆಗಿದ್ದಾನೆ–ಮಗನೂ ಆಗಿದ್ದಾನೆ. ಪರೀಕ್ಷೆ ಮುಗಿದ ಮೇಲೆ ಕೆಲಸ ಸಿಕ್ಕಲಿ ಸುಮ್ಮನಿರು–ಮದುವೆಗೆ ಅವಸರ ಮಾಡುವುದು ಬೇಡ ಎಂದು ನಾನು ಹೇಳಿದೆ. ಅದಕ್ಕೆ ಜಾನಕಿ 'ಶಾಮು ಕೈಲಾಗದವನೇ–ಓದಿದ್ದಾನೆ, ಅವನಿಗೊಂದು ಕೆಲಸ ಸಿಕ್ಕೇ ಸಿಕ್ಕುತ್ತದೆ. ನಮ್ಮ ಮನೆಗೆ ಬರುವ ಹುಡುಗಿ ಪುಣ್ಯದಿಂದ ಅವನಿಗೆ ಒಳ್ಳೆಯ ಕೆಲಸವೇ ಸಿಕ್ಕಬಹುದು. ಕೆಲಸದ ನೆಪ ಹೇಳಿ ಮದುವೆ ಮುಂದಕ್ಕೆ ಹಾಕುವುದು ಬೇಡ' ಎಂದು ಹೇಳಿದ್ದಾಳೆ."

" ನನ್ನ ಮಗುವನ್ನು ನಿಮ್ಮ ಕೈಗೆ, ಜಾನಕಮ್ಮನ ಕೈಗೆ ಹಾಕಿದ್ದೇನೆ. ನೀವು ಹಾಲಿನಲ್ಲಾದರೂ ಹಾಕಿ, ನೀರಿನಲ್ಲಾದರೂ ಹಾಕಿ " ಎಂದರು.

ಕ್ರಿಸ್‌ಮಸ್ ರಜಾ ಆರಂಭವಾದ ದಿನವೇ ಶಾಮು ಸೋಲೂರಿಗೆ ಬಂದ. ಮೂರು ದಿನಗಳಲ್ಲಿ ವೆಂಕಣ್ಣನವರು ಮೈಲಾರಯ್ಯ, ಜಾನಕಮ್ಮ, ಶಾಮುನನ್ನು ಮನೆಗೆ ಬರಮಾಡಿಕೊಂಡು ಕನ್ಯಾ ಪ್ರದರ್ಶನ ಮಾಡಿದರು.

ಕ್ರಿಸ್‌ಮಸ್ ರಜಾ ಕಳೆದು, ಹೊಸವರ್ಷ ಆರಂಭವಾಯಿತು.

ಶಾಮು ಊರಿಗೆ ಹಿಂದಿರುಗಲು ಆತುರಗೊಂಡ.

" ಒಂಭತ್ತರ ತನಕ ರಜಾ ಇದೆಯೆಂದು ಹೇಳಿದೆಯಲ್ಲೋ ಶಾಮು "

ಎಂದು ಜಾನಕಮ್ಮ ಕೇಳಿದಳು.

" ರಜಾ ಇದೆ ಅತ್ತಿಗೆ. ನಾನು ಊರಿಗೆ ಹೋಗಿ ಓದು ಆರಂಭಿಸಬೇಕು. ಪರೀಕ್ಷೆಗೆ ಇನ್ನು ಮೂರೇ ತಿಂಗಳು ಇರುವುದು."

" ಅಂಬಮ್ಮನವರು ದಿನಾ ಕೇಳುತ್ತಾ ಇದ್ದಾರೆ–ಸುಭದ್ರೆಯನ್ನು ನೋಡಿದೆಯಲ್ಲಾ–ನಿನ್ನ ಅಭಿಪ್ರಾಯವೇನು ?"

" ನನಗೆ ಈಗಲೇ ಮದುವೆ ಬೇಡ ಅತ್ತಿಗೆ."

" ಆಡಿದ ಮಾತೇ ಆಡೋದಿಕ್ಕೆ ನನಗೆ ಬೇಜಾರಪ್ಪ. ಪರೀಕ್ಷೆ ಮುಗಿದ

ಮೇಲೆ ನಿನ್ನ ಮದುವೆ ಮಾಡುವುದೆಂದು ನಿಶ್ಚಯಿಸಿದ್ದಾಗಿದೆ. ನೀನು ಮತ್ತೆ ರಾಗ ತೆಗೆದರೆ...."

"ನೀನು ಅಣ್ಣ ನಿಶ್ಚಯಿಸಿದಿರಿ–ನಾನು ಒಪ್ಪಿದೆನೇ ಅತ್ತಿಗೆ ?"

"ಓಹೋ! ಕೋಳಿ ಕೇಳಿ ಸಾಂಬಾರ ಅರೆಯಬೇಕೋ ?–ದೊಡ್ಡವನಾದೆ–ಬಿ. ಎ ಕ್ಲಾಸಿಗೆ ಬಂದಿದ್ದೀ–ಇನ್ನು ನಿನಗೇಕಪ್ಪಾ ಅಣ್ಣ ಅತ್ತಿಗೆ ಮಾತು !"

"ನಾನು ಏನೋ ಹೇಳಿದರೆ ನೀನು ಏನೋ ಅರ್ಥ ಮಾಡುತ್ತೀ ಅತ್ತಿಗೆ. ನಾನು ಮದುವೆಯಾಗಲ್ಲ ಎಂದು ಹೇಳಿದೆನೆ–ಈಗಲೇ ಬೇಡ ಎಂದು ಹೇಳಿದೆ. ಅಷ್ಟೆ !"

"ನಿನ್ನ ಯೋಗಕ್ಷೇಮ ನೀನೇ ನೋಡಿಕೊಳ್ಳುವ ಹಾಗಿದ್ದರೆ ಒಳ್ಳೆಯದೇ ಆಯಿತು–ನನಗೂ ಅವರಿಗೂ ಕಷ್ಟವೇ ತಪ್ಪಿತು."

"ಹೋಗಲಿ–ನಿನ್ನ ಮನಸ್ಸಿನಲ್ಲಿ ಏನಿದೆ ಸ್ಪಷ್ಟವಾಗಿ ಹೇಳಿಬಿಡು ಅತ್ತಿಗೆ."

"ಸುಭದ್ರ ಬಲು ಒಳ್ಳೆಯ ಹುಡುಗಿ ಕಣೋ–ನನ್ನನ್ನಂತೂ ಬಲು ಹೊಂದಿಕೊಂಡಿದ್ದಾಳೆ. ಅವಳು ನಮ್ಮ ಮನೆಗೆ ತಂದುಕೊಳ್ಳಬೇಕೆಂದು ಇಷ್ಟ ಪಟ್ಟಿದ್ದೇನೆ. ವೆಂಕಣ್ಣನವರು, ಅಂಬಮ್ಮ ಚಿನ್ನದಂಥ ಜನ. ಈ ಊರಿಗೆ ನಾವು ಬಂದಾಗಿನಿಂದ ನಮ್ಮ ಯೋಗಕ್ಷೇಮ ಹೇಗೆ ನೋಡಿಕೊಳ್ಳುತ್ತಿದ್ದಾರೇಂತಿ ?"

"ಅದೆಲ್ಲಾ ಸರಿ–ಹುಡುಗಿಗೆ ವಿದ್ಯೆಯಿಲ್ಲ–ಬುದ್ಧಿಯಿಲ್ಲವಲ್ಲಾ ಅತ್ತಿಗೆ."

"ಬುದ್ಧಿಯಿಲ್ಲವೇ ?–ಸುಭದ್ರನ ಕೈಲಿ ನೀನು ಮಾತಾಡಿನೋಡು–ಬುದ್ಧಿ ಇದೆಯೋ ಇಲ್ಲವೋ ಗೊತ್ತಾಗತ್ತೆ. ವಿದ್ಯಾ–ಹೆಂಗಸಿಗೆ ಎಷ್ಟು ವಿದ್ಯಾ ಇರಬೇಕು ? ಸುಭದ್ರ ಲೋವರ್ ಸೆಕೆಂಡರಿ ಪಾಸು ಮಾಡಿದ್ದಾಳೆ. ರಾಮಾಯಣ, ಭಾರತ ಓದಿಕೊಂಡಿದ್ದಾಳೆ. ಮನೆಗೆಲಸ ಅಚ್ಚುಕಟ್ಟಾಗಿ ಮಾಡ್ತಾಳೆ. ಇನ್ನೇನು ಬೇಕು ?–ಕಾಲೇಜಿಗೆ ಮಣ್ಣು ಹಾಕಿರುವ ಬಣ್ಣದ ಬೀಸಣಿಗೆ ಕಟ್ಟಿಕೊಂಡರೆ ನೀನು ಉಳೀತೀಯೇನೋ ? ನಿನಗೇನು–ಸಂಸಾರ ಮಾಡೋದಿಕ್ಕೆ ಹೆಂಡತಿ ಬೇಕೋ, ತಾನೇ ಕಟ್ಟೋಕೆ ನಾಯಕಸಾನಿ ಬೇಕೋ ?"

"ಓದಿದವರೆಲ್ಲಾ ಹಾಗೆ ಇರುತ್ತಾರೆಯೇ ಅತ್ತಿಗೆ."

"ಏನೋಪ್ಪ–ನಾನಂತೂ ಹಳೇ ಕಾಲದವಳು. ಈಗಿನ ಕಾಲದವರು–ನಿಮ್ಮ ಮನಸ್ಸೇ ನನಗೆ ಅರ್ಥವಾಗುವುದಿಲ್ಲ. ಓದಿದ ಹೆಣ್ಣು ಮಕ್ಕಳನ್ನು ಕಟ್ಟಿಕೊಂಡವರ ಪಾಡು ನೋಡಿ ನೋಡಿ, ನಿನಗಂತೂ ಓದಿದ ಹುಡುಗಿ ತರ ಬಾರದು ಎಂದು ನಿಶ್ಚಯಿಸಿಕೊಂಡಿದ್ದೇನೆ–ಇವರ ಮೇಲೆ ನಿನ್ನ ಇಷ್ಟ."

ಅತ್ತಿಗೆಯ ಮಾತಿಗೆ ಪ್ರತಿ ಹೇಳುವುದು ಶಾಮುನಿಗೆ ದುಸ್ಸಾಧ್ಯವಾಯಿತು.

ಎರಡು ದಿನ ವಿಶ್ರಾನವೇಷ ಎಣಿಸಿ, ಊರಿಗೆ ಹೊರಡುವ ಮುನ್ನ,

"ನಿನಗೆ ಹೇಗೆ ಬೇಕೋ ಹಾಗೆ ಮಾಡು ಅತ್ತಿಗೆ. ನಿನ್ನ ಮನಸ್ಸಿಗೆ ವಿರೋಧವಾಗಿ ನಾನು ನಡೆಯುವುದಿಲ್ಲ"

ಎಂದು ಹೇಳಿದ.

# ೧೧

ಕೊನೆಗೂ ಜಾನಕಮ್ಮನ ಹಟವೇ ಗೆದ್ದಿತು.

ವೆಂಕಣ್ಣನವರು ವೈಶಾಖ ಮಾಸದಲ್ಲಿ ಲಗ್ನವೇರ್ಪಡಿಸಿ, ಸುಭದ್ರೆಯನ್ನು ಶಾಮನಿಗೆ ಧಾರೆಯೆರೆದುಕೊಟ್ಟರು.

ಮದುವೆ ಮುಗಿದ ಮೇಲೆ ಒಂದು ತಿಂಗಳು ಸೋಲೂರಿನಲ್ಲೇ ಇದ್ದ ಶಾಮ, ಬೆಂಗಳೂರಿಗೆ ಪ್ರಯಾಣ ಬೆಳಸಿದ.

ಒಂದು ದಿನ ಶಾಮನಿಂದ ಬಂದ ಪತ್ರ ಮೈಲಾರಯ್ಯನಿಗೆ ಪರಮ ಸಂತೋಷವನ್ನುಂಟುಮಾಡಿತು. ಕೂಡಲೆ ವೆಂಕಣ್ಣನವರ ಮನೆಗೆ ಬಂದ ಮೈಲಾರಯ್ಯ,

"ನಿಮ್ಮ ಅಳಿಯನಿಗೆ ಪಾಸಾಯಿತು ವೆಂಕಣ್ಣನವರೇ" ಎಂದು ತಿಳಿಸಿದ.

ಆ ಸುದ್ದಿ ಕೇಳಿದ ಅಂಬಮ್ಮನವರು ಮಗಳ ಕೈಯಲ್ಲಿ ದೇವರಿಗೆ ತುಪ್ಪದ ದೀಪ ಹೊತ್ತಿಸಿಟ್ಟು ಭಕ್ತಿಯಿಂದ ನಮಸ್ಕರಿಸಿದರು.

"ಮುಂದಿನ ಯೋಚನೆ ಏನು ಮಾಡಿದ್ದೀರಿ ಮೈಲಾರಯ್ಯನವರೇ."

"ನಾನು ನಾಳೆ ನಾಡಿದ್ದು ಬೆಂಗಳೂರಿಗೆ ಹೋಗಿ ಬರುತ್ತೇನೆ. ಶಾಮ ಮುಂದಕ್ಕೆ ಓದುವ ಹಾಗಿದ್ದರೆ ಓದಲಿ–ಓದು ಬೇಡವಾದರೆ ಅವನಿಗೊಂದು ಕೆಲಸ ಹುಡುಕಬೇಕು."

"ಕೆಲಸ ಸಿಕ್ಕಿದರೆ ಅವನು ಮನೆ ಮಾಡಬೇಕಾಗುತ್ತದೆ."

"ಹೌದು. ನನಗೂ ಟ್ರಾನ್ಸ್‌ಫರ್ ಆಗುವ ಸಂಭವವಿದೆ. ಬೆಂಗಳೂರಿಗೆ ಟ್ರಾನ್ಸ್‌ಫರ್ ಸಿಕ್ಕಿದರೆ ಎಲ್ಲರೂ ಒಟ್ಟಿಗೆ ಇರಬಹುದು."

"ನಿಮ್ಮನ್ನು ಎಲ್ಲಿಗೆ ಟ್ರಾನ್ಸ್‌ಫರ್ ಮಾಡುವರಂತೆ!"

"ತರಲೆಕೊಂಪೆಗಳಿಗೆಲ್ಲಾ ನಾನೇ ವಾರಸುದಾರನಾಗಿರುವಂತೆ ಕಾಣುತ್ತದೆ ವೆಂಕಣ್ಣನವರೇ ಕಾನಕಾನಹಳ್ಳಿಗೆ ಹೋಗು ಎಂದು ಹೇಳುತ್ತಿದ್ದಾರೆ."

"ಎಲ್ಲಿದ್ದರೂ ನೀವು ನಿಭಾಯಿಸಬಲ್ಲಿರಪ್ಪ."

"ಪುಂಡರನ್ನು ಅಡಗಿಸಬಹುದು ವೆಂಕಣ್ಣನವರೇ–ಪುಢಾರಿಗಳನ್ನು

ಅಡಗಿಸುವುದು ಕಷ್ಟವಾಗಿದೆ. ಅವರು ಹೇಳಿದ ಹಾಗೆ ನಾವು ಕೇಳದಿದ್ದರೆ ಮಂತ್ರಿಗಳ ಹತ್ತಿರ ದೂರು ಒಯ್ಯುತ್ತಾರೆ–ಇದರ ಮೇಲೆ ಜಾತಿ ಜಗಳ. ನಾನು ಬೆಂಗಳೂರಿನಲ್ಲಿ ಇರಲಿ–ಇಲ್ಲದಿರಲಿ ಅಲ್ಲೊಂದು ಮನೆ ಮಾಡಬೇಕಾಗುತ್ತದೆ. ಸುಭದ್ರನನ್ನು ಕಳಿಸುವುದಕ್ಕೆ ನೀವು ಸಿದ್ಧರಾಗಿರಬೇಕು."

" ಅವಳು ಒಂದೆರಡು ವರ್ಷ ಜಾನಕಮ್ಮನ ಜತೆ ಇದ್ದಿದ್ದರೆ ಚೆನ್ನಾಗಿತ್ತು ಹೊಸದರಲ್ಲಿ ಗಂಡನ ಮನಸ್ಸು ಹೆಂಡತಿಗೆ ಅರ್ಥವಾಗಲ್ಲ ಹೆಂಡತಿ ಮನಸ್ಸು ಗಂಡನಿಗೆ ಅರ್ಥವಾಗಲ್ಲ. ಇಬ್ಬರಿಗೂ ವಿವೇಕ ಹೇಳುವ ಒಬ್ಬ ಹಿರಿಯರು ಇದ್ದ. ಒಳ್ಳೆಯದು "

" ಒಂದು ವೇಳೆ ನನಗೆ ಕಾನಕಾನಹಳ್ಳಿಗೆ ವರ್ಗವಾದರೆ ನೀವು ಅಂಬಮ್ಮನವರನ್ನು ಸುಭದ್ರೆ ಜತೆ ಕಳಿಸಿಕೊಡಿ.–ನಿಮಗೆ ತೊಂದರೆಯಾಗುತ್ತೆ. ನಾಲ್ಕು ದಿವಸ ನೀವು ಕಾಲ ತಳ್ಳಬೇಕಾಗುತ್ತದೆ."

" ನನ್ನದೇನು ಬಿಡಿ–ಹೇಗೋ ಆಗತ್ತೆ" ಎಂದರು.

ಎರಡು ದಿನಗಳ ತರುವಾಯ ಮೈಲಾರಯ್ಯ ಬೆಂಗಳೂರಿಗೆ ಪ್ರಯಾಣ ಬೆಳಸಿದ.

ಸುಬ್ಬರಾಯಪ್ಪನವರು ಮೈಲಾರಯ್ಯನನ್ನು ಸ್ವಾಗತಿಸಿ,

" ಏನು ಬಂದೆ ಮೈಲಾರಯ್ಯ" ಎಂದು ಕೇಳಿದರು.

" ನನ್ನ ತಮ್ಮನಿಗೆ ಪಾಸಾಯಿತು ಸಾರ್. ತಮಗೆ ತಿಳಿಸಿ ಹೋಗಲು ಬಂದೆ."

" ಬಹಳ ಸಂತೋಷ–ಕೈಹಿಡಿದ ಹುಡುಗಿ ಪುಣ್ಯ ಒಳ್ಳೆಯದಯ್ಯಾ."

" ಎಲ್ಲಾ ತಮ್ಮ ಆಶೀರ್ವಾದ ಸಾರ್."

" ನಿನ್ನ ತಮ್ಮ ಮುಂದೆ ಏನು ಮಾಡುತ್ತಾನಂತೆ "

" ಮುಂದಕ್ಕೆ ಓದು ಎಂದು ಹೇಳಿದೆ–ಅವನಿಗೆ ಓದುವುದಕ್ಕೆ ಇಷ್ಟವಿಲ್ಲ. ಕೆಲಸಕ್ಕೆ ಸೇರುತ್ತೇನೆಂದು ಹೇಳಿದ."

" ಕೆಲಸಕ್ಕೆ ಏನಾದರೂ ಪ್ರಯತ್ನ ಮಾಡಿದ್ದಾನೆಯೇ ?"

" ಇನ್ನೂ ಇಲ್ಲಿ–ನಾನು ಬರಲಿ ಎಂದು ಕಾಯುತ್ತಿದ್ದ."

ಸುಬ್ಬರಾಯಪ್ಪನವರು ಯೋಚಿಸುತ್ತ,

" ಸರ್ಕಾರಿ ಕೆಲಸ ಸಿಕ್ಕುವುದು ಬಹಳ ಕಷ್ಟವಲ್ಲ ಮೈಲಾರಯ್ಯ–ಪಬ್ಲಿಕ್ ಸರ್ವಿಸ್ ಕಮಿಷನ್ನಿನ ಪಟ್ಟಿಯಲ್ಲಿ ಅವನ ಹೆಸರು ದಾಖಲಾಗಬೇಕು. ಶಾಮನ ಸರದಿ ಬರುವ ಹೊತ್ತಿಗೆ ಅವು ಅಜ್ಜನೋ ಮುತ್ತಜ್ಜನೋ ಆಗಿರುತ್ತಾನೆ. ಯಾವದಾದರೂ ಖಾಸಗೀ ಸಂಸ್ಥೆಯಲ್ಲೇ ಪ್ರಯತ್ನ ಮಾಡಬೇಕು."

" ತಾವೇ ಏನಾದರೂ ಮಾಡಬೇಕು ಸಾರ್."

" ನೀನು ಒಂದೆರಡು ದಿವಸ ಇಲ್ಲೇ ಇರ್ತೀಯಲ್ಲಾ !"

" ಇರ್ತೀನಿ–ನನ್ನ ಟ್ರಾನ್ಸ್‌ಫರ್ ವಿಷಯ ಇನ್ನೂ ಇತ್ಯರ್ಥವಾಗಿಲ್ಲ."

" ಹೆಡ್‌ಕ್ವಾರ್ಟರ್ಸ್‌ಗೆ ನಿನ್ನ ತೆಗೆದುಕೊಳ್ಳಬೇಕೆಂದು ನಾನು ಸಾಹೇಬರಿಗೆ ಹೇಳಿದೆನಪ್ಪಾ...."

" ಅದಕ್ಕೆ ಅವರು ಏನಂದರು ಸಾರ್."

" ಹೆಡ್‌ಕ್ವಾರ್ಟರ್ಸ್ ಕೆಲಸ ಹೇಗೋ ಸಾಗತ್ತೆ–ತಾಲ್ಲೂಕುಗಳಲ್ಲಿ ಪಂಚಾಯಿತಿ ಆಗಿಹೋಗಿದೆ. ನಮ್ಮ ಒಳ್ಳೆಯ ಆಫೀಸರುಗಳನ್ನ ತಾಲ್ಲೂಕುಗಳಿಗೆ ಕಳಿಸದಿದ್ದರೆ ಅಡ್‌ಮಿನ್‌ಸ್ಟ್ರೇಷನ್ (administration) ಬಿಗಿಯೇ ತಪ್ಪಿಹೋಗುತ್ತದೆ. ಸದ್ಯಕ್ಕೆ ಕಾನಕಾನಹಳ್ಳಿ ಪುಂಡುಕೊಂಪೆಯಾಗಿದೆ–ಅದನ್ನು ಹದ್ದುಬಸ್ತಿಗೆ ತರೋದಿಕ್ಕೆ ವೈಲಾರಯ್ಯನೇ ಸರಿಯಾದ ಆಸಾಮಿ ಎಂದರು."

" ಡಿಪಾರ್ಟ್‌ಮೆಂಟಿನಲ್ಲಿ ದಕ್ಷತೆ ತೋರಿಸುವುದೇ ಅಪರಾಧವಾಗಿದೆಯಲ್ಲ ಸಾರ್."

" ಬೆಂಗಳೂರೇನು, ಕಾ ನ ಕಾ ನ ಹ ಳ್ಳಿ ಯೇ ನು–ಕಾನಕಾನಹಳ್ಳಿಗೇ ಹೋಗು."

" ತಾವು ಎಲ್ಲಿಗೆ ಕಳಿಸಿದರೂ ನಾನು ಹೋಗುವುದಕ್ಕೆ ಸಿದ್ಧವಾಗಿದ್ದೇನೆ ಸಾರ್. ಆದರೆ ನನಗೆ ಬರುತ್ತಿರುವ ಸಂಬಳದಲ್ಲಿ ಎರಡು ಸಂಸಾರ ನಡೆಸುವುದು ಹೇಗೆ ?"

" ಎರಡು ಸಂಸಾರ ? !"

" ಶಾಮುನಿಗೆ ಕೆಲಸ ಸಿಕ್ಕಿದರೂ, ಸಾವಿರಾರು ರೂಪಾಯಿ ಸಂಬಳ ಬರೋದಿಲ್ಲ. ಅವನನ್ನು ಬೆಂಗಳೂರಿನಲ್ಲಿ ಸ್ಥಾಪಿಸಬೇಕು. ಅವನ ಸಂಸಾರಕ್ಕೆ ಸಾಲದೆ ಬರುವುದನ್ನು ನಾನು ಕಳಿಸಿಕೊಡಬೇಕು. ಜತೆಗೆ ನನ್ನ ಸಂಸಾರದ ಖರ್ಚು. ಬೆಂಗಳೂರೇ ನನಗೆ ಸಿಕ್ಕಿದ್ದರೆ ಒಟ್ಟಿಗೆ ಇರಲು ಸಾಧ್ಯವಾಗುತ್ತಿತ್ತು.–ನನಗೂ ನಾಲ್ಕು ಕಾಸು ಮಿಗುತ್ತಿತ್ತು."

" ನೀನು ಸಾಹೇಬರನ್ನ ನೋಡಿಕೊಂಡು ಬಾ–ನಾನೂ ಅವರನ್ನು ಕಂಡು ಒಂದು ಮಾತು ಹೇಳುತ್ತೇನೆ.–ಈ ಸಲ ' ಪ್ರೆಸಿಡೆಂಟ್ ಮೆಡಲ್ 'ಗೆ ನಿನ್ನ ಹೆಸರು ರೆಕ್‌ಮೆಂಡ್ (Recommend) ಆಗಿದೆ ಕಣಯ್ಯಾ."

" ಥ್ಯಾಂಕ್ಸ್ ಸಾರ್–ಶಾಮುನ ಕೆಲಸದ ವಿಷಯ."

" ನಾನು ವಿಚಾರಿಸಿ ತಿಳಿಸುತ್ತೇನೆ. ನೀನು ನಾಳೆ–ನಾಡಿದ್ದು ಇಲ್ಲಿ ಬಾ " ಎಂದರು.

# ೧೨

ಸುಬ್ಬರಾಯಪ್ಪನವರು ಮಾಡಿದ ಎರಡು ಪ್ರಯತ್ನಗಳಲ್ಲಿ ಒಂದು ಸಫಲವಾಯಿತು–ಇನ್ನೊಂದು ಸಫಲವಾಗಲಿಲ್ಲ.

ಎರಡು ದಿನಗಳ ತರುವಾಯ ತಮ್ಮ ಭೇಟಿಗೆ ಬಂದ ವೈಲಾರಯ್ಯನಿಗೆ,

"ನಿನ್ನ ಕೆಲಸ ಒಂದಾಯಿತು–ಇನ್ನೊಂದು ಆಗಲಿಲ್ಲ ಕಣಯ್ಯಾ–I am very sorry."

"ಕಾನ್‌ಕಾನಹಳ್ಳಿ ಖಾಯಂ ಆಯ್ತೂಂತ ಕಾಣತ್ತೆ."

"ಹೂ ! ಆ ವಿಷಯದಲ್ಲಿ ಸಾಹೇಬರು ಮನಸ್ಸು ಬದಲಾಯಿಸುವ ಹಾಗೇ ಇಲ್ಲ. ವೈಲಾರಯ್ಯ ಎರಡು ವರ್ಷ ಕಾನ್‌ಕಾನಹಳ್ಳಿಯಲ್ಲಿರಲಿ–ಅವನಿಗೆ ಗ್ರೇಡ್ ಕೊಡಿಸಿ ಬೆಂಗಳೂರಿಗೆ ಕರೆಸಿಕೊಳ್ಳುತ್ತೇನೆ ಎಂದರು. ಸಾಹೇಬರು ನಿನ್ನ ವಿಷಯದಲ್ಲಿ ತುಂಬ ಅಭಿಮಾನ ತಳೆದಿದ್ದಾರೆ–ಅವರ ಮಾತು ಕೇಳು."

"ಆಗಲಿ ಸ್ವಾಮಿ."

"ವಿದ್ಯೋದಯ ಹೈಸ್ಕೂಲ್ ಹೆಡ್‌ಮಾಷ್ಟರ್ ಚಂದ್ರಶೇಖರಯ್ಯ ನನ್ನ ಸ್ನೇಹಿತರು–ಅವರಿಗೆ ಹೇಳಿದ್ದೇನೆ. ಒಂದು ಅಪ್ಲಿಕೇಷನ್ ಬರೆದು ತೆಗೆದುಕೊಂಡು ಹೋಗಿ ಕೊಡು ಎಂದು ನಿನ್ನ ತಮ್ಮನಿಗೆ ಹೇಳು. ಎಪ್ಪತ್ತೈದರ ಮೇಲೆ ಸ್ಟಾರ್ಟ್ (start) ಮಾಡ್ತಾರೆ. ಡಿ. ಎ. ಸೇರಿ ಕೈಗೆ ನೂರು ರೂಪಾಯಿ ಬರತ್ತೆ. ಸದ್ಯಕ್ಕೆ ಅಲ್ಲಿರಲಿ–ಮುಂದೆ ಸಂದರ್ಭ ನೋಡಿ ಯಾವದಾದರೂ ಗೌರ್ನಮೆಂಟ್ ಸ್ಕೂಲಿಗೆ ಹೊತ್ತು ಹಾಕಿದರಾಯಿತು. ಪಬ್ಲಿಕ್ ಸರ್ವಿಸ್ ಕಮಿಷನ್ನಿಗೂ ಒಂದು ಅಪ್ಲಿಕೇಷನ್ ಹಾಕಿಸು."

"ಹಾಕಿಸಿದ್ದೇನೆ."

"ಆಫೀಸ್ ಮ್ಯಾನೇಜರ್ ನನ್ನ ಗುರುತಿನವನಿದ್ದಾನೆ. ಅವನಿಗೆ ಹೇಳಿ ಶಾಮನ ನಂಬರು ಬೇಗ ಬರುವಂತೆ ಮಾಡುತ್ತೇನೆ."

"ತಮ್ಮ ಉಪಕಾರದ ಋಣ ಯಾವಾಗ ನಾನು ತೀರಿಸುವುದು ಸ್ವಾಮಿ."

"ತೀರಿಸಿಬಿಟ್ಟಿದ್ದೀ ಕಣಯ್ಯಾ–ಯಾವ ಸಾಲವೂ ಉಳಿದಿಲ್ಲ."

" ಇಲ್ಲ ಸ್ವಾಮಿ–ತಾವು ನನಗೆ ಸಮಾಧಾನ ಹೇಳುತ್ತಿದ್ದೀರಿ."

" ಸೋಲೂರನ್ನು ತಹಬಂದಿಗೆ ತರುವ ವಿಷಯ ಬಂದಾಗ, ನಾನು ನಿನ್ನ ಹೆಸರು ಸೂಚಿಸಿದೆ. ಸಾಹೇಬರು ಒಪ್ಪಿಕೊಂಡು ನಿನ್ನ ಪೋಸ್ಟು (post) ಮಾಡಿದರು. ನೀನು ಸಿಚುಯೇಷನ್ (situation) ಸೊಗಸಾಗಿ ಹ್ಯಾಂಡಲ್ (handle) ಮಾಡಿ ಜಯಭೇರಿ ಹೊಡೆದೆ. ಸಾಹೇಬರು ಆನಂದಪಟ್ಟುಕೊಂಡು 'ಒಳ್ಳೆಯ ಸಜೆಷನ್ (Suggestion) ಕೊಟ್ಟಿರಿ ಸುಬ್ಬರಾಯಪ್ಪ – this Mylaraiah is a remarkable fellow' ಎಂದರು ಅದರಿಂದ ನನಗೂ ಒಂದು ಕೋಡು ಬೆಳೆದಂತಾಯಿತು. ನೀನು ಸೋಲೂರಿನಲ್ಲಿ ಫೇಲ್ (fail) ಆಗಿಬಿಟ್ಟಿದ್ದರೆ ನನಗೆ ಎಷ್ಟು ಅಪಮಾನವಾಗುತ್ತಿತ್ತು ನೋಡು."

" ನನ್ನ ಭಾಗದ ದೇವರು ಇದ್ದ ಹಾಗಿದ್ದೀರಿ ಸ್ವಾಮಿ. ನಾನು ಎಲ್ಲೇ ಇರಲಿ–ತಮ್ಮ ಅದೃಶ್ಯಹಸ್ತ ನನ್ನನ್ನು ಕಾಪಾಡುತ್ತಾ ಇರುತ್ತದೆ."

" ಎಲ್ಲಾ ಒಳ್ಳೆಯದಾಗತ್ತೆ ಹೋಗು–ಯೋಚನೆಮಾಡಬೇಡ"

ಎಂದು ಸುಬ್ಬರಾಯಪ್ಪನವರು ಹರಸಿದರು.

ಊರಿಗೆ ಹಿಂದಿರುಗಿದ ಮೈಲಾರಯ್ಯ ತನಗೆ ವರ್ಗವಾಗಿರುವ ಸುದ್ದಿ ತಿಳಿಸಲು ಊರಿಗೆ ಊರೇ ಅಸಮಾಧಾನಗೊಂಡಿತು.

ಶಾನುಭೋಗರು, ಪಟೇಲ, ಊರಿನ ಕೆಲವು ಗಣ್ಯರು ಗೃಹಮಂತ್ರಿಗಳಲ್ಲಿಗೆ ಹೋಗಲು ನಿರ್ಧರಿಸಿದರು.

ನಿಯೋಗ ಹೋಗುವುದರಿಂದ ಯಾವ ಪ್ರಯೋಜನವೂ ಆಗುವುದಿಲ್ಲ ಎಂದು ಮೈಲಾರಯ್ಯ ತಿಳಿಸಿದರೂ ಅವರು ಕೇಳಲಿಲ್ಲ.

ನಿಯೋಗ ಗೋಷ್ಠಿಯನ್ನು ತಮ್ಮ ಛೇಂಬರ್ಸಿನಲ್ಲಿ ಸ್ವಾಗತಿಸಿದ ಗೃಹಮಂತ್ರಿಗಳು ಅವರ ವಾದವನ್ನು ಶಾಂತಚಿತ್ತರಾಗಿ ಲಾಲಿಸಿ,

" ನೋಡಿ–ಇವುಗಳೆಲ್ಲಾ ಡಿಪಾರ್ಟ್‌ಮೆಂಟಿಗೆ ಸಂಬಂಧಪಟ್ಟ ವಿಷಯಗಳು. ಮಹತ್ತರ ಕಾರಣಗಳಿರುವುದರಿಂದಲೇ ಐ. ಜಿ ಯವರು ಮೈಲಾರಯ್ಯನವರನ್ನು ಕಾನಕಾನಹಳ್ಳಿಗೆ ವರ್ಗಮಾಡಿದ್ದಾರೆ. ಅವರ ಇಲಾಖೆಯ ಆಡಳಿತದಲ್ಲಿ ನಾವು ಕೈಹಾಕುವುದು ನ್ಯಾಯವಲ್ಲ"

" ನಮ್ಮೂರು ಪುಂಡು ಕೊಂಪೆಯಾಗಿತ್ತು. ಮೈಲಾರಯ್ಯನವರು ಬಂದ ಮೇಲೆ ಸಜ್ಜನರು ಬಾಳಲು ಸಾಧ್ಯವಾಯಿತು. ಮೈಲಾರಯ್ಯನವರು ಇನ್ನೂ ಕೆಲವು ದಿನ ನಮ್ಮೂರಿನಲ್ಲೇ ಇದ್ದರೆ ಊರು ಬಹಳ ಮುಂದಕ್ಕೆ ಬರುತ್ತದೆ."

" ಮೈಲಾರಯ್ಯನವರಿಗೆ ಸರ್ಕಾರ ಅನ್ಯಾಯಮಾಡಿಲ್ಲ. ಅವರಿಗೆ ಬಡ್ತಿ ಕೊಡಲಾಗಿದೆ. ನಿಮ್ಮ ಊರನ್ನು ಸುಧಾರಿಸಿದ ಹಾಗೆ ಇತರ ಪುಂಡುಕೊಂಪೆ

ಗಳನ್ನು ಸುಧಾರಿಸಬೇಡವೇ ಯೋಚಿಸಿ. ಅಧಿಕಾರಿಗಳು ಎಷ್ಟೇ ಒಳ್ಳೆಯವರಾಗಲಿ, ದಕ್ಷರಾಗಲಿ ಒಂದೇ ಊರಿನಲ್ಲಿ ಬಹಳ ಕಾಲ ನಿಲ್ಲುವುದು ಯೋಗ್ಯವಲ್ಲ. ಈ ಬಗ್ಗೆ ನಾನು ಏನೂ ಮಾಡಲು ಸಾಧ್ಯವಿಲ್ಲ ಕ್ಷಮಿಸಿ" ಎಂದರು.

ನಿಯೋಗಗೋಷ್ಠಿಯವರು 'ಬಂದ ದಾರಿಗೆ ಸುಂಕವಿಲ್ಲ' ಎಂದುಕೊಂಡು ಊರಿಗೆ ಹಿಂದಿರುಗಿ ತಮ್ಮ ಕೃತಜ್ಞತೆಯನ್ನು ಯೋಗ್ಯರೀತಿಯಲ್ಲಿ ವ್ಯಕ್ತಪಡಿಸಲು ನಿರ್ಧರಿಸಿದರು.

ಮೈಲಾರಯ್ಯನ ಕೈಯ್ಯಿಗೆ ಟ್ರಾನ್ಸ್‌ಫರ್ ಆರ್ಡರ್ ಬಂದಿತು.

ಅವನು ಕಾನಕಾನಹಳ್ಳಿಗೆ ಹೊರಡಲು ಅಣಿಯಾಗುತ್ತಿದ್ದಂತೆ ಊರಿನವರು ಒಂದು ಭಾರಿ ಸಮಾರಂಭ ಏರ್ಪಡಿಸಿ ಅವನಿಗೆ ಮಾನಪತ್ರ ಸಮರ್ಪಿಸಿ ಗೌರವಿಸಿದರು.

ವೆಂಕಣ್ಣನವರು, ಅಂಬಮ್ಮ ಬೀಗರು, ಬೀಗಿತ್ತಿಯನ್ನು ಬರಮಾಡಿಕೊಂಡು ಓತಣವೇರ್ಪಡಿಸಿ, ಉಡುಗೊರೆಗಳನ್ನಿತ್ತರು.

ಕಷ್ಟವಾದ ಒಂದು 'ಕರ್ತವ್ಯ ಭಾಗ' ನಿರ್ವಹಿಸುವುದಕ್ಕೆ ಮೈಲಾರಯ್ಯ ಸಂಜೆ ಭರಮೇಗೌಡನ ಮನೆಗೆ ಬಂದ.

ದುಃಖಾರ್ತಳಾಗಿದ್ದ ಚೆನ್ನಿ ಅವನನ್ನು ಅಪ್ಪಿ

"ಎಂದು ಒಲ್ಡುತ್ತೀರಿ ?" ಎಂದು ಕೇಳಿದಳು.

"ನಾಡಿದ್ದು."

"ಕೊನೆಗೂ ನನ್ನ ದಿಕ್ಕಿಲ್ದ ಪರದೇಶಿ ಮಾಡಿದ್ರಿ !"

"ನಾನೇನು ಮಾಡಲಿ ಚೆನ್ನಿ."

"ಕಾನಕಾನಹಳ್ಳಿಗೆ ನನ್ನೂ ಕರ್ಕೊಂಡು ಓಗಿ."

"ಅದೆಲ್ಲಾ ಆಗಿ ಹೋಗುವ ಮಾತಲ್ಲ."

ಒಂದೇ ಸಮನೆ ಕಣ್ಣೀರು ಸುರಿಸುತ್ತಿದ್ದ ಚೆನ್ನಿಯನ್ನು ಸಂತೈಸುತ್ತಾ,

"ಕಾನಕಾನಹಳ್ಳಿ ಇಲ್ಲಿಗೆ ಬಹಳ ದೂರವಿಲ್ಲ ಚೆನ್ನಿ–ವಾರಕ್ಕೆ ಒಂದು ಸಾರಿ ಬಂದು ನಿನ್ನನ್ನು ನೋಡಿಕೊಂಡು ಹೋಗುತ್ತೇನೆ."

"ಏಳೋದು ಅಂಗೇ–ಅಲ್ಲಿ ಓದನ್ಮ್ಯಾಕೆ ನನ್ನ ಮರ್ತೇ ಬುಡ್ತೀರಿ."

"ನನ್ನ ಮಾತು ನಂಬು ಚೆನ್ನಿ–ನಾನು ಖಂಡಿತ ಬರುತ್ತೇನೆ."

"ನಾಳಿದ್ದಲ್ವಾ ಒಲ್ಡೋದು."

"ಹೌದು."

"ನಾಳೆಯೆಲ್ಲಾ ಇಲ್ಲೇ ಇದ್ದು ಬುಡಿ."

"ಇನ್ನೂ ಕೆಲಸಗಳಿವೆ–ನಾಳೆ ಬಂದು ಹೋಗುತ್ತೇನೆ."

"ಒಂದೀಸ ಇರಾಕೂ ಆಯ್ಕಿಲ್ವಾ ?"

ಮೈಲಾರಯ್ಯ ಯೋಚಿಸಿ,

"ಆಗಲಿ ಚೆನ್ನಿ–ನಾಳೆ ಬಂದು ಇಲ್ಲೇ ಇರ್ತಿನಿ" ಎಂದ.

"ಬರೋವಾಗ ಒಳ್ಳೇದು ಏನಾರಾ ತಕ್ಕೊಂಡು ಬನ್ನಿ."

"ದಸ್ತಗೀರನ್ನ ಇವತ್ತೇ ಬೆಂಗಳೂರಿಗೆ ಕಳಿಸಿ ತರಿಸಿಡುತ್ತೇನೆ."

"ನಾನು ಕಾನಕಾನಹಳ್ಳೀಗೆ ಬಂದ್ರೆ ನನ್ನ ಬಂದು ನೋಡ್ತೀರಾ ?"

"ಹೇಗೆ ಬರುತ್ತೀ ?"

"ಅಲ್ಲಿ ನನ್ನ ನೆಂಟರವ್ರೆ !"

"ಅವರಿಗೆ ಗೊತ್ತಾದ್ರೆ."

"ಗೊತ್ತಾಗಕಿಲ್ಲ–ಟೇಸನ್ನಿಗೆ ನಾನು ಗಂಗಿ ಕಳಿಸ್ತೀನಿ. ಅವಳ ಜತೆ ಬನ್ನಿ–ಊರ್ನಿಂದ ದೂರ ಎಲ್ಲಿಗಾರಾ ಓಗಿ ಬರೋಣ."

"ಆಗಲಿ"

ಎಂದು ಸಮ್ಮತಿ ವ್ಯಕ್ತಪಡಿಸಿದ.

# ೧೨

೧೯೩೯ ರಿಂದ ೧೯೪೭ರ ವರೆಗೆ ನಡೆದ ರಾಷ್ಟ್ರೀಯ ಚಳುವಳಿಯಲ್ಲಿ ಕಾನಕಾನಹಳ್ಳಿಯೂ ಭಾಗವಹಿಸಿತ್ತು. ಅಲ್ಲಿಂದ ಸ್ವಯಂ ಸೇವಕರಾಗಿ ಹೊರಟ ಹಲವರು ಕಾರಾಗೃಹವಾಸ ಅನುಭವಿಸಿದ್ದರು. ಕೆಲವರು ತಮ್ಮ ಆಸ್ತಿ ಪಾಸ್ತಿಗಳನ್ನು ಕಳೆದುಕೊಂಡಿದ್ದರು. ಇಡೀ ದೇಶದಲ್ಲಿ ಲಾಸ್ಯವಾಡುತ್ತಿದ್ದ ತ್ಯಾಗ, ಪರಾಕ್ರಮ, ದೇಶಾಭಿಮಾನ ಕಾನಕಾನಹಳ್ಳಿಯಲ್ಲಿಯೂ ಪ್ರತಿಬಿಂಬಿಸಿತ್ತು. ದೇಶಕ್ಕೆ ಸ್ವಾತಂತ್ರ್ಯ ಲಭಿಸಿದ ಮೇಲೆ ದೇಶಾಭಿಮಾನದ ಸ್ವರೂಪ ಕ್ರಾಂತಿಕಾರಕ ಬದಲಾವಣೆಗೀಡಾಯಿತು. ಕಾರಾಗೃಹವಾಸ ಅನುಭವಿಸಿ ಬಂದಿದ್ದ ಕೆಲವರು ದೊಡ್ಡ ದೊಡ್ಡ ಸ್ಥಾನಗಳನ್ನು ಆಕ್ರಮಿಸಿದರು; ಉಳಿದವರು ದೇಶ ತಮಗೆ ಮಾಡಿದ್ದ ಅನ್ಯಾಯವನ್ನು ಸರಿಪಡಿಸಿಕೊಳ್ಳಲೆತ್ನಿಸಿದರು.

ದೊಡ್ಡೇಗೌಡ ೨ ಜೈಲಿನ ಮುಖ ಕಂಡು ಬಂದಿದ್ದ. ಬರಿಗೈ, ಬರಿಗಾಲು, ಬರಿ ತಲೆಯುಳ್ಳಿದ್ದ ದೊಡ್ಡೇಗೌಡನಿಗೆ ರಾಜಕೀಯ ಚೆನ್ನಾಗಿ ಮೈಗಂಟಿತು. ರಾಜಕೀಯ ಸಂತ್ರಸ್ತನೆಂದು ಇಪ್ಪತ್ತು ಎಕರೆ ಜಮೀನು ಸಂಪಾದಿಸಿಕೊಂಡ ದೊಡ್ಡೇಗೌಡ, ಮಹಾಚುನಾವಣೆಯ ಕಾಲದಲ್ಲಿ ಸಾಕಷ್ಟು ಹಣ ಗಳಿಸಿಕೊಂಡು, ಎರಡು ಬಸ್‌ಲೈನುಗಳನ್ನು ನಡೆಸುತ್ತಿದ್ದ. ಕಾನಕಾನಹಳ್ಳಿಯಲ್ಲಿ ನಾಲ್ಕು ಮನೆಗಳನ್ನು ಕೊಂಡಿದ್ದ ಮಂತ್ರಿಗಳಿಗೂ, ಅಧಿಕಾರಿಗಳಿಗೂ ಮಧ್ಯಸ್ಥನಾಗಿ ವರ್ತಿಸುತ್ತಿದ್ದ ದೊಡ್ಡೇಗೌಡ ಊರಿನ ಪುಡಾರಿಯಾಗಿದ್ದುದಲ್ಲದೆ, ಬಹುಲಾಭದಾಯಕವಾದ ಲೋಕಸೇವಾವೃತ್ತಿಯನ್ನೂ ಕೈಗೊಂಡಿದ್ದ.

ಸ್ವಾತಂತ್ರ್ಯನಂತರ ಊರಿನ 'ಪ್ರವಾಸಿಗರ ಬಂಗಲೆ' ದೊಡ್ಡೇಗೌಡನ ದ್ವಿತೀಯ ಗೃಹವಾಯಿತು. ಊರಿಗೆ ಗಣ್ಯರಾದವರು ಯಾರೇ ಬರಲಿ, ದೊಡ್ಡೇಗೌಡ, ಅವನ ಎರಡು ನಿಂಬೇಹಣ್ಣುಗಳು ಹಾಜರಾಗುತ್ತಿದ್ದವು.

'ಕೈಕೆಸರಾಗದೆ ಬಾಯಿ ಮೊಸರಾಗುವ' ಕಲೆ ದೊಡ್ಡೇಗೌಡನಿಗೆ ಸಾಧಿಸಿದ್ದಂತೆ ಮತ್ತೆ ಯಾರಿಗೂ ಸಾಧಿಸಿರಲಿಲ್ಲ. ಚುನಾವಣೆಗಳು, ಅಧ್ಯಕ್ಷಸ್ಥಾನಗಳು, ವೇದಿಕೆಯ ಭಾಷಣಗಳನ್ನು ಗೌಡ ಕಣ್ಣೆತ್ತಿಯೂ ನೋಡುತ್ತಿರಲಿಲ್ಲ.

ಅವನ ರಾಜಕೀಯವೆಲ್ಲಾ 'ತೆರೆಯ ಮರೆಯ' ರಾಜಕೀಯ! ಯಾರನ್ನು ಬ್ಯಾಂಕ್ ಚುನಾವಣೆಗೆ ನಿಲ್ಲಿಸಬೇಕು–ಯಾರನ್ನು ಉರುಳಿಸಬೇಕು!–ಯಾವ ಜಾತಿಯನ್ನು ಮೇಲಕ್ಕೆತ್ತಬೇಕು–ಯಾವ ಜಾತಿಯನ್ನು ತುಳಿಯಬೇಕು!–ಬೇಡದವರ ವಂಶ ತೊಡೆದು ಹಾಕುವುದು ಹೇಗೆ? ಎಂಬ ವಿಷಯಗಳಲ್ಲಿ ಅವನು ಅಸಾಧಾರಣ ಪ್ರಾಜ್ಞತೆಯನ್ನು ದೊರಕಿಸಿಕೊಂಡಿದ್ದ.

ದೊಡ್ಡೇಗೌಡನಿಗೆ ಬಲಹಸ್ತದಂತಿದ್ದವನು ಲಾಯರ್ ಲಿಂಗಣ್ಣ. ಪ್ಲೀಡರ್ ಪರೀಕ್ಷೆಮಾಡಿಕೊಂಡು ಬಂದು ಲಾಯರ್ ವೃತ್ತಿ ಅವಲಂಬಿಸಿದ್ದ ಲಿಂಗಣ್ಣ, ಕೆಲವು ವಿಶಿಷ್ಟ ಕಾರಣಗಳಿಂದ, ಪ್ರ್ಯಾಕ್ಟೀಸ್ ಚೆನ್ನಾಗಿ ಬೆಳೆಸಿಕೊಂಡು ಖದೀಮ ಲಾಯರ್‌ಗಳನ್ನು ಹೆದರಿಸುತ್ತಿದ್ದ.

ದೊಡ್ಡೇಗೌಡ, ಲಿಂಗಣ್ಣನನ್ನು ಕಂಡರೆ ಆಗದಿದ್ದವರು ಅವರನ್ನು 'ಹಿರಣ್ಯಾಕ್ಷ–ಹಿರಣ್ಯಕಶಿಪು' ಎಂದು ಕರೆಯುತ್ತಿದ್ದರು.

ಕಾನಕಾನಹಳ್ಳಿಯಲ್ಲಿ ಇನ್ಸ್‌ಪೆಕ್ಟರ್ ವೈಲಾರಯ್ಯನಿಗೆ ನಿಗದಿಯಾಗಿದ್ದ ಮನೆಯ ಹೆಂಚು ಕೈಯ್ಯಾಡುವ ಕೆಲಸ ನಡೆದಿತ್ತು. ಸಂಸಾರ ಸಮೇತ ಕಾನಕಾನಹಳ್ಳಿಗೆ ಬಂದ ವೈಲಾರಯ್ಯ ಪ್ರವಾಸಿಗರ ಬಂಗಲೆಯಲ್ಲಿ ಬೀಡುಬಿಟ್ಟ.

ಮಾರನೆಯ ದಿನವೇ ದೊಡ್ಡೇಗೌಡ, ಕೈಯಲ್ಲಿ ಎರಡು ನಿಂಬೇಹಣ್ಣುಗಳನ್ನು ಹಿಡಿದು, ಲಿಂಗಣ್ಣನೊಂದಿಗೆ 'ಸಾಹೇಬರನ್ನು' ಕಾಣಲು ಬಂದ.

ಕಾನಕಾನಹಳ್ಳಿಗೆ ಬರುವ ಮುನ್ನವೇ ವೈಲಾರಯ್ಯ ಅಲ್ಲಿನ ರಾಜಕೀಯ, ಮುಖಂಡರ ಒಳ ಹೊರಗಿನ ಜೀವನ ತಿಳಿದುಬಂದಿದ್ದ.

ಸಾಹೇಬರನ್ನು ಭೆಟ್ಟಿಯಾಗಿ ಪುಢಾರಿಗಳು ನಿಂಬೇಹಣ್ಣು ಅರ್ಪಿಸಿದರು. ಗೌಡನ ಪರಿಚಯ ಲಿಂಗಣ್ಣ ಮಾಡಿಕೊಟ್ಟ; ಲಿಂಗಣ್ಣನ ಪರಿಚಯ ಗೌಡ ಮಾಡಿಕೊಟ್ಟ.

"ತಾವು ನಮ್ಮೂರಿಗೆ ಬಂದದ್ದು ಬಹಳ ಸಂತೋಷ ಸ್ವಾಮಿ. ಸೋಲೂರಿನ ಪುಂಡರನ್ನು ನೀವು ಅಡಗಿಸಿ, ಅಲ್ಲಿ ಶಾಂತಿ ಸ್ಥಾಪಿಸಿದ ವಿಷಯ ನಮಗೆಲ್ಲಾ ಗೊತ್ತಾಗಿ ಆನಂದವಾಯಿತು. ತಮ್ಮಂಥ ಕೆಲವು ಗಟ್ಟಿಗರು ಪೋಲೀಸ್ ಡಿಪಾರ್ಟ್‌ಮೆಂಟಿನಲ್ಲಿ ಇರುವ ಹೊತ್ತಿಗೇ ದೇಶ ಬದುಕಿರುವುದು"

ಎಂದು ಲಿಂಗಣ್ಣ ಪ್ರಶಂಸಿದ.

ದೊಡ್ಡೇಗೌಡ ಅತ್ಯಂತ ವಿನಯದಿಂದ,

"ಸ್ವಾಮಿ ಮನೆ ಇನ್ನೂ ಸಿದ್ಧವಾಗಿಲ್ಲವೆಂದು ಕಾಣುತ್ತೆ" ಎಂದ.

"ಇಲ್ಲ ಗೌಡರೇ–ಹೆಂಚು ಕೈಯ್ಯಾಡ್ತಾ ಇದ್ದಾರಂತೆ–ಇನ್ನೂ ಸುಣ್ಣ

ಬಣ್ಣ ಆಗ್ಬೇಕು. ಪ್ರವಾಸಿಗರ ಬಂಗಲೆಯಲ್ಲಿ ನಾವು ಎಂಟು ಹತ್ತು ದಿವಸ ಇರಬೇಕಾಗುತ್ತದೆ."

"ತಾವು ಯಾವುದಕ್ಕೂ ಕೊರತೆಪಟ್ಟುಕೊಳ್ಳಬಾರದು. ಏನು ಬೇಕಾದರೂ ನನಗೆ ಒಂದು ಮಾತು ತಿಳಿಸಿದರೆ ಸೇವೆಗೆ ಸಿದ್ಧವಾಗುತ್ತೇನೆ."

"ನಿಮಗೇಕೆ ತೊಂದರೆ ಕೊಡಬೇಕು ಗೌಡರೇ."

"ತೊಂದರೆಯೆಲ್ಲಿಂದ ಬಂತು ಸ್ವಾಮಿ–ತಮ್ಮ ಸೇವೆ ಮಾಡುವ ಭಾಗ್ಯ ಎಲ್ಲರಿಗೂ ಸುಲಭವಾಗಿ ಸಿಕ್ಕುತ್ತದೆಯೇ ?"

"ಊರಿನಲ್ಲಿ ತಂಟೆ, ತಕರಾರು ಆಗದಂತೆ ನೋಡಿಕೊಳ್ಳುವುದು ನನ್ನ ಕರ್ತವ್ಯ. ನೀವುಗಳೆಲ್ಲಾ ನನ್ನೊಂದಿಗೆ ಸಹಕರಿಸಬೇಕು."

"ಅಗತ್ಯವಾಗಿ ಆಗಲಿ–ಸಾಮಾನ್ಯವಾಗಿ ನಮ್ಮೂರಿಗೆ ಬರುವ ಪೋಲೀಸ್ ಅಧಿಕಾರಿಗಳೆಲ್ಲಾ ನಮ್ಮ ವಿಷಯದಲ್ಲಿ ಸ್ನೇಹಭಾವದಿಂದಲೇ ವರ್ತಿಸುತ್ತಿದ್ದರು. ತಾವೂ ಹಾಗೇ ಇರಬೇಕು. ನಮ್ಮೂರಿನಲ್ಲಿ ತಮಗೆ ಎಲ್ಲ ವಿಷಯಗಳಲ್ಲಿಯೂ ಅನುಕೂಲವಾಗಬೇಕೇ ವಿನಾ ಅನಾನುಕೂಲವಾಗಬಾರದು."

"ನನ್ನ ಕರ್ತವ್ಯ ನಾನು ನಿರ್ವಹಿಸಿಬಿಡುತ್ತೇನೆ ಗೌಡರೇ–ಇದರಿಂದ ಅನುಕೂಲವಾದರೂ ಒಂದೇ, ಅನಾನುಕೂಲವಾದರೂ ಒಂದೇ."

"ಹಾಗೆ ತಾನೇ ಇರಬೇಕು–ಅದೇ ಸರಿ ಸ್ವಾಮಿ"

ಎಂದು ಕೈಮುಗಿದು ಹೋದರು.

ಅವರು ಆಡಿದ್ದ ಮಾತುಗಳು ಅಂತರಾರ್ಥವನ್ನು ಹುಡುಕುತ್ತ ಮೈಲಾರಯ್ಯ ಕುಳಿತ.

ಅವನ ಬಳಿ ಬಂದ ಜಾನಕಮ್ಮ,

"ಏನು ಬಹಳ ಯೋಚನೆ ಮಾಡುತ್ತಿದ್ದೀರಿ ?" ಎಂದಳು.

"ಈಗ ಇಬ್ಬರು ಬಂದಿದ್ದರು–ನೋಡಿದೆಯಾ ?"

"ನೋಡಿದೆ–ಏಕೆ ?"

"ಇವರೇ ಇನ್ನುಮುಂದೆ ನನ್ನೊಂದಿಗೆ ಕಾದಾಡುವ ಪೈಲ್ವಾನರು."

"ಅವರು ಎಷ್ಟು ಚೆನ್ನಾಗಿ ಮಾತಾಡ್ತಿದ್ರು."

"ಅವರ ಮಾತು ಸಕ್ಕರೆಯಲ್ಲದ್ದಿದ ವಿಷ–ಪೋಲೀಸ್ ಅಧಿಕಾರಿಗಳೆಲ್ಲಾ ಇವರ ಸ್ನೇಹಿತರಾಗಿದ್ದರಂತೆ–ನಾನೂ ಹಾಗೇ ಇದ್ದರೆ ನನಗೆ ಎಲ್ಲ ಅನುಕೂಲ ಕಲ್ಪಿಸಿಕೊಡುತ್ತಾರಂತೆ !"

"ಅವರು ಹೇಳಿದ್ದರಲ್ಲಿ ಏನು ತಪ್ಪು–ನ್ಯಾಯವಾಗಿಯೇ ಇದೆಯಲ್ಲಾ !"

"ಅಯ್ಯೋ ಪೆದ್ದೀ–ಇಷ್ಟು ಅರ್ಥವಾಗದೇನೇ ! ನಾವು ಮಾಡಬಾರದ್ದು

ಮಾಡುತ್ತೇವೆ–ನೀನು ಕಣ್ಣು ಮುಚ್ಚಿಕೊಂಡಿರು–ಕಣ್ಣು ಮುಚ್ಚಿಕೊಂಡಿರುವುದಕ್ಕೆ ನಿನಗೂ 'ಕಾಕಪಿಂಡ' ಹಾಕುತ್ತೇವೆ. ಕಣ್ಣು ಬಿಟ್ಟು ನೀನು ಗರ್–ಗುರ್ ಅಂದರೆ ನಿನ್ನ ಕೇಡುಗಾಲ ಆರಂಭವಾಗತ್ತೆ ಎಂದು ಸ್ಪಷ್ಟವಾಗಿ ಹೇಳಿದರು"

"ಸರಿ–ಇನ್ನು ಮೂರು ತಿಂಗಳಿಗೆ ಗಂಟು ಮೂಟೆ ಕಟ್ಟಬೇಕೇನೋ ?"

"ತಂದಿರುವ ಗಂಟು ಮೂಟೆ ಬಿಚ್ಚದೆ ಇದ್ದರಾಯಿತು–ಈ ಪುಣ್ಯಾತ್ಮರು ಯಾವಾಗ ಟ್ರಾನ್ಸ್‌ಫರ್ ಆರ್ಡರ್ ತರುವರೋ ?" ಎಂದ.

## ೧೪

ಒಂದು ವಾರದಲ್ಲಿ ಮನೆ ಸಿದ್ಧವಾಗಲು ಮೈಲಾರಯ್ಯ ' ಪ್ರವಾಸಿಗರ ಬಂಗಲೆ ' ತ್ಯಜಿಸಿ, ಮನೆಗೆ ವಾಸಕ್ಕೆ ಹೋದ.

ಒಂದು ದಿನ ಬೆಳಿಗ್ಗೆ ಮೈಲಾರಯ್ಯ ಎದ್ದು ಹೊರಗೆ ಬರುವ ವೇಳೆಗೆ ವೆರಾಂಡದಲ್ಲಿ ಕಾದಿದ್ದ ಒಬ್ಬರು ಎದ್ದು ನಿಂತು, ಅವನ ಕೈಗೊಂದು ನಿಂಬೆಯ ಹಣ್ಣನ್ನಿತ್ತು ನಮಸ್ಕರಿಸಿದರು.

" ಯಾರು ನೀವು ?"

" ನನ್ನ ಹೆಸರು ರಾಮಣ್ಣಗೌಡ."

ಮೈಲಾರಯ್ಯ ರಾಮಣ್ಣಗೌಡರಿಗೆ ಹಸ್ತಲಾಘವವಿತ್ತು,

" ನಿಮ್ಮ ವಿಷಯ ಕೇಳಿದ್ದೇನೆ ಗೌಡರೇ ನಿಮಗೆ ಹೇಳಿಕಳಿಸಿದ್ದೆ-ಊರಿನಲ್ಲಿಲ್ಲವೆಂದು ತಿಳಿಯಿತು "

" ಹೌದು ಸ್ವಾಮಿ ಡಿ ಪಿ.ಐ ಸಾಹೇಬರನ್ನು ಕಾಣುವುದಕ್ಕೆ ಬೆಂಗಳೂರಿಗೆ ಹೋಗಿದ್ದೆ."

" ನೀವು ಒಂದು ಹೈಸ್ಕೂಲ್ ನಡೆಸುತ್ತಿರುವಿರಂತೆ !"

" ಅದಕ್ಕಾಗಿಯೇ ಬೆಂಗಳೂರಿಗೆ ಹೋಗಿದ್ದೆ-ಶಿಕ್ಷಣಾಧಿಕಾರಿಗಳು ' ನಿಮ್ಮ ಸ್ಕೂಲಿಗೆ ತಕ್ಕ ಕಟ್ಟಡವಿಲ್ಲ-ಲೈಬ್ರರಿಯಿಲ್ಲ-ಲ್ಯಾಬೊರೇಟರಿ ಇಲ್ಲ-ಅವುಗಳನ್ನೆಲ್ಲಾ ವರ್ಷಾಂತ್ಯದೊಳಗಾಗಿ ಒದಗಿಸಿಕೊಳ್ಳದಿದ್ದರೆ ನಿಮಗೆ ಕೊಟ್ಟಿರುವ ಅನುಮತಿಯನ್ನು ಹಿಂದಕ್ಕೆ ಪಡೆಯಲಾಗುತ್ತದೆ ' ಎಂದು ನೋಟೀಸ್ ಕೊಟ್ಟರು. ಆ ವಿಷಯ ಮಾತನಾಡುವುದಕ್ಕೇ ನಾನು ಬೆಂಗಳೂರಿಗೆ ಹೋಗಿದ್ದೆ."

" ಲೈಬ್ರರಿ, ಲ್ಯಾಬೊರೇಟರಿ ಇಲ್ಲದೆ ಹೈಸ್ಕೂಲು ನಡೆಸುವುದಕ್ಕಾಗುತ್ತದೆಯೇ ಗೌಡರೇ."

" ಲೈಬ್ರರಿ, ಲ್ಯಾಬೊರೇಟರಿ ಎರಡೂ ಇದೆ ಸ್ವಾಮಿ-ಸಾಲದು ಎಂದು ಒಪ್ಪಿಕೊಳ್ಳುತ್ತೇನೆ. ಗ್ರ್ಯಾಂಟಿಗೆ ಆರುವರ್ಷಗಳಿಂದ ಪ್ರಯತ್ನಿಸುತ್ತಿದ್ದೇನೆ. ಅದು ಸಿಕ್ಕಿಲ್ಲ. ನನ್ನ ಸ್ವಂತ ಕಟ್ಟಡ ಶಾಲೆಗೆ ಬಿಟ್ಟುಕೊಟ್ಟಿದ್ದೇನೆ-ಶಾಲಾ

ಖರ್ಚಿಗೆ ಹತ್ತು ಎಕರೆ ಹಸನಾದ ಭೂಮಿ ಬರೆದಿದ್ದೇನೆ. ತಿಂಗಳಿಗೆ ೨೦೦–೩೦೦ ರೂಪಾಯಿ ಕೈಯಿಂದ ಖರ್ಚುಮಾಡಿಕೊಂಡು ಶಾಲೆ ನಡೆಸುತ್ತಿದ್ದೇನೆ. ಶಾಲೆಯ ವಿದ್ಯಾರ್ಥಿನಿಲಯದಲ್ಲಿ ನಲವತ್ತು ಜನ ಬಡಮಕ್ಕಳಿದ್ದಾರೆ ಹಳ್ಳಿ ಹಳ್ಳಿಗಳಿಗೆ ಹೋಗಿ ಭಿಕ್ಷವೆತ್ತಿ ಅವರನ್ನು ಸಾಕುತ್ತಿದ್ದೇನೆ. ಇದೇನು, ಮಾಡಬಾರದ ಕೆಲಸವೇ ತಾವೇ ಹೇಳಿ."

"ಶಾಲೆಯಲ್ಲಿ ವಿದ್ಯಾರ್ಥಿಗಳು ಎಷ್ಟು ಜನರಿದ್ದಾರೆ ?"

"ಹೋದ ವರ್ಷ ನೂರೆಂಭತ್ತು ಜನರಿದ್ದರು–ಈ ವರ್ಷ ಸಂಖ್ಯೆ ಇನ್ನೂರು ಹತ್ತಕ್ಕೆ ಏರಿದೆ. ಸ್ಥಳಸಂಕೋಚದಿಂದ ನೂರು ಅಪ್ಲಿಕೇಷನ್‌ಗಳನ್ನು ನಿರಾಕರಿಸಿದೆವು–ತಾವೇ ಒಂದು ಬಾರಿ ಪುರಸತ್ತು ಮಾಡಿಕೊಂಡು ಬಂದು ಪರಾಂಬರಿಸಬೇಕು."

"ಆಗಲಿ ರಾಮಣ್ಣಗೌಡರೇ. ನಾನು ಒಂದು ದಿನ ಬರುತ್ತೇನೆ"

ಎಂದು ವಾಗ್ದಾನಮಾಡಿದ.

ಕೆಲವು ದಿನಗಳ ತರುವಾಯ ಮೈಲಾರಯ್ಯನೇ ಹೋಗಿ ರಾಮಣ್ಣಗೌಡರ ಶಾಲೆ, ವಿದ್ಯಾರ್ಥಿನಿಲಯಗಳನ್ನು ನೋಡಿಕೊಂಡು ಬಂದ. ಊರಿನ ವಿದ್ಯಮಾನಗಳ ಪರಿಚಯವೂ ಮೈಲಾರಯ್ಯನಿಗೆ ಈ ವೇಳೆಗೆ ಆಗಿದ್ದುದರಿಂದ ಶಾಲೆಯ ಪ್ರಗತಿ ಅಡ್ಡಿಯಾಗಿರುವುದರ ಕಾರಣ ಅವನಿಗೆ ಮನವರಿಕೆಯಾಯಿತು. ಸ್ಥಿತಿಗತಿಗಳನ್ನು ಸರಿಯಾಗಿ ಅರಿಯಲು ಮೈಲಾರಯ್ಯ ರಾಮಣ್ಣಗೌಡರಿಗೆ ಹೇಳಿ ಕಳಿಸಿದ.

"ನಿಮ್ಮ ಸ್ಕೂಲು, ಹಾಸ್ಟಲ್ ನೋಡಿಕೊಂಡು ಬಂದೆ ಗೌಡರೇ."

"ನನಗೆ ಹೇಳಿ ಹೇಳಿಕಳಿಸಲಿಲ್ಲವಲ್ಲಾ ಸ್ವಾಮಿ."

"ಬೇಕೆಂದೇ ಹೇಳಿಕಳಿಸಲಿಲ್ಲ. ನನಗೆ ತಿಳಿದ ಮಟ್ಟಿಗೆ ನೀವು ಮಾಡುತ್ತಿರುವುದು ಒಳ್ಳೆಯ ಕೆಲಸ–ಇದಕ್ಕೆ ಎಜುಕೇಷನ್ ಡಿಪಾರ್ಟ್‌ಮೆಂಟಿನವರೇಕೆ ಅಡ್ಡಿಯಾಗಬೇಕು ?"

"ಡಿಪಾರ್ಟ್‌ಮೆಂಟಿನವರು ನನ್ನ ಬಗ್ಗೆ ಸಹಾನುಭೂತಿಯುಳ್ಳವರಾಗಿದ್ದರು. ಡಿ. ಡಿ. ಪಿ. ಐ (D. D. P. I) ಸಾಹೇಬರು ಕಳೆದ ವರ್ಷ ಶಾಲೆಯ ಇನ್ಸ್‌ಪೆಕ್ಷನ್ ಮಾಡಿ ಒಳ್ಳೆಯ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ನನಗೆ ವಿರೋಧವಾಗಿರುವ ನಮ್ಮೂರಿನ ಪುಢಾರಿಗಳು ಶಿಕ್ಷಣ ಮಂತ್ರಿಗಳ ಮೇಲೆ ಪ್ರಭಾವ ಬೀರಿದ್ದಾರೆ."

"ನಿಮ್ಮ ಮೇಲೆ ಕತ್ತಿಕಟ್ಟಿ ಪುಢಾರಿಗಳಿಗೆ ಆಗುವ ಲಾಭವೇನು ?"

"ಕಾರಣವಿರಲಿ, ಇಲ್ಲದಿರಲಿ ಇತರರನ್ನು ಕುಟುಕುವುದೇ ಚೇಳಿನ ಹುಟ್ಟು

ಗುಣ. ಶಾಲೆ ಊರ್ಜಿತವಾದರೆ ನನಗೆ ಒಳ್ಳೆಯ ಹೆಸರು ಬರುತ್ತದೆ–ಇದನ್ನು ನಮ್ಮೂರಿನ ಪುಢಾರಿಗಳು ಸಹಿಸುವುದು ಹೇಗೆ ?"

" ಇದರಲ್ಲಿ ದೊಡ್ಡೇಗೌಡ–ಲಿಂಗಣ್ಣನ ಪಾತ್ರವೇನು ?"

" ಅವರೇ ಎಲ್ಲ ಪಾತ್ರಧಾರಿಗಳು. ತಮಗೆ ಸ್ವಲ್ಪ ಬಿಡುವಿದ್ದರೆ ಪೂರ್ವ ಕಥೆ ಹೇಳುತ್ತೇನೆ."

" ಹೇಳಿ–ಹೇಳಿ."

" ಒಂದು ಕಾಲದಲ್ಲಿ ನಾನೂ ಕಾಂಗ್ರೆಸ್ಸಿನಲ್ಲಿದ್ದೆ, ಕಾಂಗ್ರೆಸ್ ಸಂಸ್ಥೆ ಬೆಳೆಸುವುದಕ್ಕೆ ನಾನೂ ಶಕ್ತ್ಯಾನುಸಾರ ಸಹಾಯಮಾಡಿದ್ದೇನೆ. ದೊಡ್ಡೇಗೌಡ ನನ್ನೂ ಹತ್ತಾರು ಸ್ವಯಂಸೇವಕರನ್ನೂ ವರ್ಷಗಟ್ಟಲೆ ಸಾಕಿದೆ. ಅಧಿಕಾರ ಕೈಗೆ ಬಂದ ಕೂಡಲೆ ದೊಡ್ಡೇಗೌಡನ ಮುಖವೇ ಬದಲಾಯಿಸಿತು. ಕೈಗೆ ಸಿಕ್ಕಿದ್ದನ್ನು ಅವನು ನುಂಗುತ್ತ ಬಂದ. ಕಾಂಗ್ರೆಸ್ಸಿನ ಹೆಸರಿನಲ್ಲಿ ಮಾಡಬಾರದ ಅತ್ಯಾಚಾರ ಗಳನ್ನು ಮಾಡುತ್ತ ಬಂದ. ನಮ್ಮೂರಿಗೆ ಬರುತ್ತಿದ್ದ ಅಧಿಕಾರಿಗಳು ಅವನಿಗೆ ಹೆದರಿಕೊಂಡು ಅವನು ಹೇಳಿ ಹೇಳಿದ ಹಾಗೆ ಕುಣಿಯುತ್ತ ಬಂದರು. ಕಾಂಗ್ರೆಸ್ ಸಂಸ್ಥೆಯೊಳಗೇ ಇದ್ದುಕೊಂಡು ನಾನು ಇವುಗಳನ್ನೆಲ್ಲಾ ಸರಿಪಡಿಸ ಲೆತ್ನಿಸಿದೆ. ದೊಡ್ಡೇಗೌಡನಿಗೂ ನನಗೂ ಘರ್ಷಣೆ ಅನಿವಾರ್ಯವಾಯಿತು. ಗೌಡ ತನ್ನ ಹಿಂಬಾಲಕರನ್ನೆಲ್ಲಾ ತಾಲ್ಲೂಕು ಕಾಂಗ್ರೆಸ್ ಕಮಿಟಿಯಲ್ಲಿ ತುಂಬಿ, ನನ್ನನ್ನು ಸೋಲಿಸಿಬಿಟ್ಟ. ನಾನು ಬೇಸತ್ತು ಕಾಂಗ್ರೆಸ್ಸಿಗೆ ರಾಜೀನಾಮೆಯಿತ್ತು, ಈ ಶಾಲೆಯ ಕೆಲಸ ಕೈಗೊಂಡೆ. ಶತಾಯ ಗತಾಯ ಶಾಲೆ ಬಾಗಿಲು ಮುಚ್ಚಿಸ ಬೇಕೆಂದು ಗೌಡ ಪ್ರಯತ್ನಿಸಿದ–ಸಾಧ್ಯವಾಗಲಿಲ್ಲ. ನಾನು ತಿರುಪೆ ಬೇಡಿದರೂ ಚಿಂತೆಯಿಲ್ಲ–ಈ ಶಾಲೆ ನಡೆಸಲೇಬೇಕು ಎಂದು ನಾನೂ ಶಪಥಮಾಡಿದೆ–ತಾವು ನನಗೆ ಸ್ವಲ್ಪ ನೆರವುಕೊಟ್ಟರೆ ಶಾಲೆ ಉಳಿಯುತ್ತದೆ."

" ನೀವು ಹೇಳುತ್ತಿರುವುದು ಅಕ್ಷರಶಃ ಸತ್ಯ ಎಂಬುದು ಖಚಿತವಾಗಿದೆ ಗೌಡರೇ. ನನ್ನ ಶಕ್ತಿಮೀರಿ ನಿಮಗೆ ಸಹಾಯಮಾಡಬೇಕೆಂದು ಆಸೆಯಿದೆ. ಆದರೆ ಇಂದಿನ ಪರಿಸ್ಥಿತಿಯಲ್ಲಿ ನಾನು ನೇರವಾಗಿ ನಿಮಗೆ ಸಹಾಯ ಮಾಡುವುದು ಸಾಧ್ಯವೂ ಇಲ್ಲ–ಸರಿಯೂ ಅಲ್ಲ. ನಿಮ್ಮ ಹಿಂದೆ ನಾನು ಇರುತ್ತೇನೆ. ನನ್ನ ಹೆಸರು ಹೊರಗೆ ಬರದಂತೆ ನೋಡಿಕೊಳ್ಳುವುದು ನಿಮ್ಮ ಭಾರ."

" ಛೆ ! ಛೆ ! ನಿಮ್ಮನ್ನು ನಾನು ತೊಂದರೆಗೆ ಸಿಕ್ಕಿಸುತ್ತೇನೆಯೇ ಸ್ವಾಮಿ. ನೀವು ಆಶೀರ್ವಾದ ಮಾಡಿದರೆ ಸಾಕು "

ಎಂದು ಹೇಳಿದ.

ಎರಡು ತಿಂಗಳು ಕಳೆಯುವಲ್ಲಿ ಮೈಲಾರಯ್ಯನಿಗೂ, ರಾಮಣ್ಣಗೌಡನಿಗೂ ವಿಶ್ವಾಸ ಬೆಳೆಯಿತು.

ಗೌಡ ಪ್ರತಿಯೊಂದಕ್ಕೂ ಮೈಲಾರಯ್ಯನ ಸಲಹೆ ಕೇಳಿ ಅವನ ನಿರ್ದೇಶ ದಂತೆ ನಡೆದುಕೊಳ್ಳುತ್ತಿದ್ದ.

ಒಂದು ದಿನ ಮೇಕೆದಾಟಿನ ಬಳಿ ನಡೆದಿದ್ದ ಒಂದು ಖೂನಿ ಮೊಕದ್ದಮೆಯ ಇನ್‌ವೆಸ್ಟಿಗೇಷನ್ನಿಗೆ ಹೋಗಿದ್ದ ಮೈಲಾರಯ್ಯ ಮನೆ ಸೇರಲು ಸಂಜೆಯಾಯಿತು.

ಸ್ನಾನ ಮುಗಿಸಿ, ಅಲ್ಪೋಪಹಾರ ಸ್ವೀಕರಿಸಿ ಅವನು ವಿಶ್ರಾಂತಿ ಪಡೆಯು ತ್ತಿರಲು ರಾಮಣ್ಣಗೌಡ ಬಂದ.

ಗೌಡನಿಗೆ ಕೇಸಿನ ವಿಷಯಗಳನ್ನು ತಿಳಿಸಿದ ಮೈಲಾರಯ್ಯ,

"ಜನ ಹೇಗಿದ್ದಾರೆ ನೋಡಿದಿರಾ ಗೌಡರೇ–ಎರಡೂವರೆ ರೂಪಾಯಿಗೆ ಒಂದು ಖೂನಿಯೇ? ಜನರ ನೈತಿಕಬಲ ಹೀಗೆ ಕುಸಿದುಬಿದ್ದರೆ ಗತಿಯೇನು?"

"ಪ್ರಳಯ–ಮಹಾಪ್ರಳಯ! ದೇವರ ಹೆಸರಿನಲ್ಲಿ ವ್ಯಾಪಾರ–ಧರ್ಮದ ಹೆಸರಿನಲ್ಲಿ ವ್ಯಾಪಾರ–ಕಾಂಗ್ರೆಸ್ ಹೆಸರಿನಲ್ಲಿ ವ್ಯಾಪಾರ–ಗಾಂಧೀಜಿಯವರ ಹೆಸರಿ ನಲ್ಲಿ ವ್ಯಾಪಾರ. ಸ್ವಾರ್ಥವೇ ಈಗ ನಮ್ಮ ದೇವರು ಸ್ವಾಮಿ–ಇನ್ನೂ ನೋಡುತ್ತಾ ಇರಿ–ತಂದೆ ಮಗನನ್ನು, ಮಗ ತಂದೆಯನ್ನು ಹರಿದು ತಿನ್ನುತ್ತಾರೆ. ಊರುಗಳು ಅರಣ್ಯಗಳಾಗುತ್ತವೆ–ಮನುಷ್ಯರು ಕಾಡುಮೃಗಗಳಂತೆ ಆಚರಿಸುತ್ತಾರೆ."

"ಧರ್ಮ ಖಿಲವಾದರೆ ಜಗತ್ತು ಉಳಿಯುತ್ತೇನ್ರೀ!"

"ಉಳಿಯುವುದಿಲ್ಲ–ಉಳಿಯಲೂ ಬಾರದು. ಮಹಾಪ್ರಳಯವಾಗಿ, ಈ ಹೊಲಸೆಲ್ಲಾ ಕೊಚ್ಚಿಹೋಗಬೇಕು. ಆಮೇಲೆ ಹೊಸಸೃಷ್ಟಿಯಾಗಬೇಕು. ಬಾಪೂಜಿ ಹೇಳುತ್ತಿದ್ದ 'ರಾಮರಾಜ್ಯ' ಆಗ ಹುಟ್ಟುತ್ತದೆ"

ಮೈಲಾರಯ್ಯನ ಮುಖದ ಮೇಲೆ ಆಯಾಸದ ಗೆರೆಗಳು ಮೂಡಿದ್ದುದನ್ನು ಕಂಡ ಗೌಡ,

"ನಿಮಗೆ ತುಂಬ ಆಯಾಸವಾಗಿರುವ ಹಾಗಿದೆ–ಊಟಮಾಡಿದಿರಾ ಸ್ವಾಮಿ."

"ಇಲ್ಲಪ್ಪ. ಸಂಜೆ ಯಾರು ಅನ್ನ ತಿನ್ನುತ್ತಾರೆ. ಸ್ವಲ್ಪ ಉಪಾಹಾರ ಸ್ವೀಕರಿಸಿದೆ."

"ಒಂದೋ ಎರಡೋ ಪೆಗ್ ಬ್ರ್ಯಾಂದಿ ತೆಗೆದುಕೊಂಡಿದ್ದರೆ ಆಯಾಸ ಕಡಿಮೆಯಾಗುತ್ತಿತ್ತು?"

"ಈ ಊರಿನಲ್ಲಿ ಎಲ್ಲಿ ಬ್ರ್ಯಾಂದಿ ಸಿಕ್ಕಬೇಕು ಗೌಡರೇ?"

ರಾಮಣ್ಣಗೌಡ ನಕ್ಕು,

"ನಮ್ಮೂರು ಯಾವದಕ್ಕೆ ಕಡಿಮೆಯೆಂದು ತಿಳಿದುಕೊಂಡಿದ್ದೀರಿ ಸ್ವಾಮಿ. ಈಗ ನಿಮಗೆ ಏನು ಬೇಕು ಹೇಳಿ–ತರಿಸಿಕೊಡುತ್ತೇನೆ"

"ನಿಜವಾಗಿ...."

"ಅರ್ಧಗಂಟೆ ಟೈಮ್ ತಾವು ನನಗೆ ಕೊಟ್ಟರೆ ಸಾಕು–ಹಾಗೇ ತಿರುಗಾಡಿಕೊಂಡು ನಮ್ಮ ಮನೆಗೇ ಬಂದು ಬಿಡಿ–ನಾನು ಎಲ್ಲಾ ಏರ್ಪಾಟು ಮಾಡಿರ‍್ತೀನಿ."

"ಇದು ಪ್ರೊಹಿಬಿಷನ್ ಏರಿಯಾ (Prohibition area)–ಇಲ್ಲಿ ಬ್ರ್ಯಾಂದಿ, ವಿಸ್ಕಿ ಯಾರು ಮಾರ‍್ತಾರ‍್ರೀ ?"

"ಯಾರೂ ಅಲ್ಲ–ನಿಮ್ಮ ಕಾಂಗ್ರೆಸ್ ಪುಢಾರಿ ಬೈರ‍್ನಹಳ್ಳಿ ದೊಡ್ಡೇಗೌಡರು. ಅವರು ಬಸ್ ಸರ್ವೀಸ್ ಇಟ್ಟಿರೋದೆ ಇದಕ್ಕೆ."

"ನಿಮಗೆ ಅವರು ಕೊಡುತ್ತಾರೆಯೇ ?"

"ಇಲ್ಲ–ಬೇರೆಯವರನ್ನು ಕಳಿಸಿ ತರಿಸುತ್ತೇನೆ. ತಾವು ನಮ್ಮ ಮನೆಗೆ ಬನ್ನಿ ಸ್ವಾಮಿ"

ಎಂದು ರಾಮಣ್ಣಗೌಡ ಎದ್ದು ಹೋದ.

ಬಣ್ಣ ಆಗ್ಬೇಕು. ಪ್ರವಾಸಿಗರ ಬಂಗಲೆಯಲ್ಲಿ ನಾವು ಎಂಟು ಹತ್ತು ದಿವಸ ಇರಬೇಕಾಗುತ್ತದೆ."

"ತಾವು ಯಾವುದಕ್ಕೂ ಕೊರತೆಪಟ್ಟುಕೊಳ್ಳಬಾರದು. ಏನು ಬೇಕಾದರೂ ನನಗೆ ಒಂದು ಮಾತು ತಿಳಿಸಿದರೆ ಸೇವೆಗೆ ಸಿದ್ಧವಾಗುತ್ತೇನೆ."

"ನಿಮಗೇಕೆ ತೊಂದರೆ ಕೊಡಬೇಕು ಗೌಡರೇ."

"ತೊಂದರೆಯೆಲ್ಲಿಂದ ಬಂತು ಸ್ವಾಮಿ–ತಮ್ಮ ಸೇವೆ ಮಾಡುವ ಭಾಗ್ಯ ಎಲ್ಲರಿಗೂ ಸುಲಭವಾಗಿ ಸಿಕ್ಕುತ್ತದೆಯೇ?"

"ಊರಿನಲ್ಲಿ ತಂಟೆ, ತಕರಾರು ಆಗದಂತೆ ನೋಡಿಕೊಳ್ಳುವುದು ನನ್ನ ಕರ್ತವ್ಯ. ನೀವುಗಳೆಲ್ಲಾ ನನ್ನೊಂದಿಗೆ ಸಹಕರಿಸಬೇಕು."

"ಅಗತ್ಯವಾಗಿ ಆಗಲಿ–ಸಾಮಾನ್ಯವಾಗಿ ನಮ್ಮೂರಿಗೆ ಬರುವ ಪೋಲೀಸ್ ಅಧಿಕಾರಿಗಳೆಲ್ಲಾ ನಮ್ಮ ವಿಷಯದಲ್ಲಿ ಸ್ನೇಹಭಾವದಿಂದಲೇ ವರ್ತಿಸುತ್ತಿದ್ದರು. ತಾವೂ ಹಾಗೇ ಇರಬೇಕು. ನಮ್ಮೂರಿನಲ್ಲಿ ತಮಗೆ ಎಲ್ಲ ವಿಷಯಗಳಲ್ಲಿಯೂ ಅನುಕೂಲವಾಗಬೇಕೇ ವಿನಾ ಅನಾನುಕೂಲವಾಗಬಾರದು."

"ನನ್ನ ಕರ್ತವ್ಯ ನಾನು ನಿರ್ವಹಿಸಿಬಿಡುತ್ತೇನೆ ಗೌಡರೇ–ಇದರಿಂದ ಅನುಕೂಲವಾದರೂ ಒಂದೇ, ಅನಾನುಕೂಲವಾದರೂ ಒಂದೇ."

"ಹಾಗೆ ತಾನೇ ಇರಬೇಕು–ಅದೇ ಸರಿ ಸ್ವಾಮಿ"

ಎಂದು ಕೈಮುಗಿದು ಹೋದರು.

ಅವರು ಆಡಿದ್ದ ಮಾತುಗಳು ಅಂತರಾರ್ಥವನ್ನು ಹುಡುಕುತ್ತ ಮೈಲಾರಯ್ಯ ಕುಳಿತ.

ಅವನ ಬಳಿ ಬಂದ ಜಾನಕಮ್ಮ,

"ಏನು ಬಹಳ ಯೋಚನೆ ಮಾಡುತ್ತಿದ್ದೀರಿ?" ಎಂದಳು.

"ಈಗ ಇಬ್ಬರು ಬಂದಿದ್ದರು–ನೋಡಿದೆಯಾ?"

"ನೋಡಿದೆ–ಏಕೆ?"

"ಇವರೇ ಇನ್ನುಮುಂದೆ ನನ್ನೊಂದಿಗೆ ಕಾದಾಡುವ ಪೈಲ್ವಾನರು."

"ಅವರು ಎಷ್ಟು ಚೆನ್ನಾಗಿ ಮಾತಾಡ್ತಿದ್ರು."

"ಅವರ ಮಾತು ಸಕ್ಕರೆಯಲ್ಲದ್ದಿದ ವಿಷ–ಪೋಲೀಸ್ ಅಧಿಕಾರಿಗಳೆಲ್ಲಾ ಇವರ ಸ್ನೇಹಿತರಾಗಿದ್ದರಂತೆ–ನಾನೂ ಹಾಗೇ ಇದ್ದರೆ ನನಗೆ ಎಲ್ಲ ಅನುಕೂಲ ಕಲ್ಪಿಸಿಕೊಡುತ್ತಾರಂತೆ!"

"ಅವರು ಹೇಳಿದ್ದರಲ್ಲಿ ಏನು ತಪ್ಪು–ನ್ಯಾಯವಾಗಿಯೇ ಇದೆಯಲ್ಲಾ!"

"ಅಯ್ಯೋ ಪೆದ್ದೀ–ಇಷ್ಟು ಅರ್ಥವಾಗದೇನೇ! ನಾವು ಮಾಡಬಾರದ್ದು

ಶಾಮು, ವಾರಕ್ಕೊ ಹದಿನೈದು ದಿನಕ್ಕೊ ಒಮ್ಮೆ ಹೆಂಡತಿಯನ್ನು ಸಿನೀಮಾಕ್ಕೆ ಕರೆದುಕೊಂಡು ಹೋಗುತ್ತಿದ್ದ.

ಗಂಡ ಊಟ ಮಾಡಿಕೊಂಡು ಶಾಲೆಗೆ ಹತ್ತೂವರೆಗೆ ಹೋದರೆ, ಮನೆಗೆ ಬರುತ್ತಿದ್ದುದು ಸಂಜೆ ಆರು, ಅಥವಾ ಏಳು ಗಂಟೆಗೆ! ಸುಮ್ಮನೆ ಕುಳಿತು ಕುಳಿತು ಏಕೆ ಕಾಲಹರಣ ಮಾಡಬೇಕೆಂದು ಸುಭದ್ರಾ, ತನ್ನ ಮನೆಯ ಸಮೀಪದಲ್ಲಿದ್ದ 'ಮಹಿಳಾ ಸಮಾಜ' ಸೇರಿ, ಹಿಂದಿ, ಕಸೂತಿ ಕೆಲಸ, ಹೊಲಿಗೆ ಕೆಲಸ ಕಲಿಯ ಲಾರಂಭಿಸಿದಳು.

ಎರಡನೆಯ ಟರ್ಮ್ (Term) ಮುಗಿದು ಬೇಸಿಗೆ ರಜಾ ಆರಂಭ ವಾಯಿತು.

ಅತ್ತೆ ಮಾವನ ಅಪೇಕ್ಷೆಯಂತೆ ಶಾಮು, ಹೆಂಡತಿಯನ್ನು ಕರೆದುಕೊಂಡು ಸೋಲೂರಿಗೆ ಹೋದ

ಒಂದು ವಾರ ಕಳೆಯಿತು

ಒಂದು ದಿನ ವೆಂಕಣ್ಣನವರು, ಅಳಿಯನೊಂದಿಗೆ ವಾಕಿಂಗ್ ಹೊರಟು, ಲೋಕಾಭಿರಾಮವಾಗಿ ಮಾತನಾಡುತ್ತಾ,

"ಈ ವರ್ಷ ನಾನು (Retire) ಆಗುತ್ತೇನೆ ಶಾಮಣ್ಣ–ಸದ್ಯದಲ್ಲೇ ಆರ್ಡರ್ ಬರುತ್ತೆ ಎಂದು ಅಮಲ್ದಾರರು ಹೇಳಿದರು."

"ಎಕ್ಸ್‌ಟೆನ್ಷನ್(Extension) ಸಿಕ್ಕುವುದಿಲ್ಲವೇ ?"

"ಎಕ್ಸ್‌ಟೆನ್ಷನ್ ಕೊಡಿಸಬೇಕೂಂತ ಅಮಲ್ದಾರರೇ ಪ್ರಯತ್ನಿಸಿದರು–ಸಫಲವಾಗಲಿಲ್ಲ. ಯಾರಿಗೂ ಎಕ್ಸ್‌ಟೆನ್ಷನ್ ಕೊಡಬಾರದೆಂದು ಈಗಿನ ಪ್ರಜಾ ಸರ್ಕಾರ ನಿಶ್ಚಯಿಸಿದೆಯಂತೆ !"

"ಹೋಗಲಿ ಬಿಡಿ–ಒಳ್ಳೆಯದೇ ಆಯಿತು–ನಾಲ್ಕು ದಿವಸ ನೀವು ವಿಶ್ರಾಂತಿ ಸುಖ ಅನುಭವಿಸಬಹುದು."

"ಸ್ವಲ್ಪ ದಿನ ನನಗೂ ಕಷ್ಟವಾಗುತ್ತದೆ. ಆಮೇಲೆ ಇದೇ ಸರಿಹೋಗುತ್ತದೆ. ಇನ್ನೊಂದು ವಿಷಯ....ರಜಾ ಮುಗಿದ ಮೇಲೆ ನೀನೊಬ್ಬನೇ ಬೆಂಗಳೂರಿಗೆ ಹೋಗಬೇಕಾಗುತ್ತದಪ್ಪಾ."

"ಏಕೆ ?"

"ಸುಭದ್ರಾ ನಿನಗೆ ಏನೂ ಹೇಳಲಿಲ್ಲವೇ ?"

"ಇಲ್ಲ."

"ಅವಳಿಗೆ ಮೂರು ತಿಂಗಳು ತುಂಬುತ್ತ ಬಂದಿದೆ."

ಶಾಮುನ ಮುಖ ಕಳೆಗುಂದಿದುದನ್ನು ಕಂಡು ವೆಂಕಣ್ಣನವರು,

" ಏಕೆ ?–ಸಂಸಾರ ಬೆಳೀತೆಂದು ಮನಸ್ಸಿಗೆ ದುಃಖವಾಗುತ್ತದೆಯೋ ?"

" ಇಷ್ಟು ಬೇಗ ಇದನ್ನು ನಾನು ನಿರೀಕ್ಷಿಸಿರಲಿಲ್ಲ."

" ಭಗವದಿಚ್ಛೆಗೆ ಯಾರು ಹೊಣೆಯಪ್ಪಾ !–ಈಚೆಗೆ ನಿಮ್ಮಣ್ಣ ಬೆಂಗಳೂರಿಗೆ ಬಂದಿದ್ದರೇನು ?"

" ಬಂದಿದ್ದ–ಕಾನಕಾನಹಳ್ಳಿಯಲ್ಲೂ ತರಲೆ ಶುರುವಾಗಿದೆಯಂತೆ! ಅವನೂ ಬೇರೆ ಕಡೆಗೆ ಟ್ರಾನ್ಸ್‌ಫರ್ ಮಾಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ."

" ಒಳ್ಳೆಯವರಿಗೆ ಎಲ್ಲೂ ಉಳಿಗಾಲಿಲ್ಲ."

" ನಾನು ನಾಳೆ–ನಾಡಿದ್ದು ಹೊರಡುತ್ತೇನೆ."

" ಏನು ಇಷ್ಟು ಅವಸರ–ಇನ್ನೂ ರಜಾ ಇದೆಯಲ್ಲಾ !"

" ರಜಾ ಇದೆ–ಅಣ್ಣ ಬಾ ಎಂದು ಹೇಳಿದ್ದಾನೆ ಕಾನಕಾನಹಳ್ಳಿಗೆ ಹೋಗಿ ಅವನ ಜತೆ ನಾಲ್ಕು ದಿವಸ ಇರಬೇಕೆಂದಿದ್ದೇನೆ. ಅತ್ತಿಗೆ ನೋಡಿ ಬಹಳ ದಿವಸಗಳಾದವು."

" ನಾನೂ ವೈಲಾರಯ್ಯನವರಿಗೆ ಕಾಗದ ಬರೆಯುತ್ತೇನೆ–ನೀನೂ ಹೇಳು. ವೈಲಾರಯ್ಯ, ಜಾನಕಮ್ಮ ಎರಡು ದಿವಸವಾದರೂ ಪುರಸತ್ತು ಮಾಡಿಕೊಂಡು, ಇಲ್ಲಿಗೆ ಬಂದು ಸುಭದ್ರೆಯನ್ನು ನೋಡಿಕೊಂಡು ಹೋದರೆ ನಮಗೆ ಸಂತೋಷ ವಾಗುತ್ತದೆ "

" ' ಒಂದು ದಿವಸ ಊರು ಬಿಡುವುದೂ ಸಾಧ್ಯವಿಲ್ಲವಾಗಿದೆ. ಕ್ಷಣಕ್ಷಣಕ್ಕೂ ಇಲ್ಲಿ ಸಮಸ್ಯೆಗಳೇಳುತ್ತಿವೆ ' ಎಂದು ಅಣ್ಣ ಹೇಳಿದ. ಅತ್ತಿಗೆಯನ್ನು ಅವನು ಕಳಿಸಿಕೊಡಬಹುದು."

" ನೀನು ಊರಿಗೆ ಹೋದ ಮೇಲೆ ಸುಭದ್ರನಿಗೆ ವಾರಕ್ಕೊಂದಾದರೂ ಕಾಗದ ಬರೆದು ಯೋಗಕ್ಷೇಮ ತಿಳಿಸುತ್ತಾ ಇರಪ್ಪ."

" ಅಗತ್ಯವಾಗಿ ಆಗಲಿ. ರಾಮಣ್ಣನನ್ನೇಕೆ ಸ್ಕೂಲು ಬಿಡಿಸಿಬಿಟ್ಟಿರಿ."

" ನಾನು ಬಿಡಿಸಿದೆನೆ–ಅವನಿಗೆ ವಿದ್ಯೆ ಹತ್ತಲಿಲ್ಲ–ಅವನೇ ಬಿಟ್ಟುಬಿಟ್ಟ."

" ಇನ್ನೂ ನಾಲ್ಕಾರು ವರ್ಷ ಓದಿ, ಅವನೂ ಒಂದು ಡಿಗ್ರಿ ಮಾಡಿ ಕೊಂಡಿದ್ದರೆ ಚೆನ್ನಾಗಿತ್ತು."

" ಚೆನ್ನಾಗಿತ್ತು–ಋಣವಿರಬೇಕಲ್ಲ."

" ಮುಂದೆ ಏನು ಮಾಡುತ್ತಾನಂತೆ."

" ಹೊಲ ಗದ್ದೆ ನೋಡಿಕೊಂಡು ಇರುತ್ತಾನೆ."

" ಒಳ್ಳೆಯದು–ಯಾರ ಅನ್ನ ದೇವರು ಎಲ್ಲಿಟ್ಟಿದ್ದಾನೆಯೋ ?" ಎಂದ.

## ೧೬

ಒಂದು ದಿನ ಸ್ಟೇಷನ್ನಿನಲ್ಲಿ ಕುಳಿತು, ಮೇಜಿನ ಮೇಲೆ ಒಂದು ಫೈಲ್ (File) ತೆರೆದಿಟ್ಟುಕೊಂಡು ಮೈಲಾರಯ್ಯ ದೀರ್ಘವಾಗಿ ವಿಚಾರಮಾಡುತ್ತಿದ್ದ.

ಇನ್ಸ್‌ಪೆಕ್ಟರ್ ಸಾಹೇಬರು ಏಕಾಂಗಿಗಳಾಗಿದ್ದುದನ್ನು ಕಂಡ ದಸ್ತಗೀರ್ ಅವರ ಬಳಿ ಸರಿದು,

" ಸಾಬ್ " ಎಂದ.

" ಏನು ದಸ್ತಗೀರ್ ?"

" ಓ ವಮ್ಮ ಆಕೋ ಹೈ."

" ಯಾರೋ ವಮ್ಮ ?"

" ನೋಲೂರು ಗೌಡ್ನ ಅವ್ರತ್."

ಚಕಿತನಾದ ಮೈಲಾರಯ್ಯ,

" ಇಲ್ಲಿಗೆ ಬಂದಿದ್ದಾಳೆಯೇ ?"

" ನೈ ಸಾಬ್–ಆ ಮೂಕಿ ಬಂದಿದ್ಳು–ಏಳ್ಬಿಟ್ಟ ಓದ್ಳು–ಅವಳ ಸಂಗಾತ ನಾನೋಗಿ ಘರ್ ನೋಡ್ಕೊಂಡಿ ಬಂದೆ."

" ಒಳ್ಳೇ ಗ್ರಹಚಾರ ಬಂತಲ್ಲೋ ದಸ್ತಗೀರ್."

" ಕ್ಯೊಂ ಸಾಬ್."

" ದೊಡ್ಡೇಗೌಡ ಅವನ ಗುಂಪಿನವರ ಕಣ್ಣೆಲ್ಲಾ ನನ್ನ ಮೇಲೆ ಇದೆ. ನಾನು ಈಗ ಚೆನ್ನಿಯನ್ನು ನೋಡಿದರೆ ಈ ಜನ ಗುಲ್ಲೆಬ್ಬಿಸದೆ ಬಿಡುತ್ತಾರೆಯೇ ?"

" ಬಂದೋಬಸ್ತು ನಾನು ಮಾಡ್ತೀನಿ ಸರ್ಕಾರ್ ನಿಮಗ್ಯಾಕೆ ಫಿಕೀರು."

" ಇಲ್ಲಿ ನೋಡುವುದು ಬೇಡ ದಸ್ತಗೀರ್. ನಾಳೆ ಮೇಕೆದಾಟಿನಲ್ಲಿ ಏರ್ಪಾಡು ಮಾಡಬೇಕು."

" ಹೊತ್ತಾರೆ ವಮ್ಮನ್ನ ಮೇಕೆದಾಟಗೆ ನಾನು ಕರ್ಕೊಂಡು ಓಗ್ತೀನಿ ಸರ್ಕಾರ್. ತಾವು ಅಲ್ಲೀಗೆ ಬಂದ್ಬುಡಿ."

" ಯಾರಿಗೂ ಗುಮಾನಿ ಬರಬಾರದು ದಸ್ತಗೀರ್."

" ಓ ಹಮ್ಕು ಛೋಡೋ ಸರ್ಕಾರ್ "

" ಊಟ ತಿಂಡಿಗೇನೋ ಮಾಡೋಣ."

" ರೈಟರ್ ಸುಬ್ಬಯ್ಯನ್ನ ಕಳ್ಸಿ ನಾನು ಅಡಿಗೆ ಮಾಡಿಸ್ತೀನಿ."

" ಹಾಗೇ ಮಾಡು–ರಾಮಣ್ಣಗೌಡರ್ನ ಹೋಗಿ ನೋಡಿ, ಅವರೇನಾದ್ರೂ ಕೊಟ್ರೆ ತೊಗೊಂಡು ಹೋಗು."

" ಅಪ್ನ ನಾನೇ ತರ್‍ತೀನಿ ಬುಡಿ ಸರ್ಕಾರ್."

" ಹೇಗೆ ?"

" ಮಿಲ್ಟ್ರಿ ಓಟೆಲ್ ಕಾಳಪ್ಪ ಗುಟ್ಟಾಗಿ ಮಾರ್‍ತಾನೆ "

" ಅವನಿಗೆ ಸಪ್ಲೈ ಮಾಡೋರು ಯಾರು ?"

" ದೊಡ್ಡೇಗೌಡರು ಓಟ್ಲಿಗೆ ಅಣಕೊಟ್ಟಿರೋರೂ ದೊಡ್ಡೇಗೌಡರಂತೆ !"

" ಕಾಳಪ್ಪನ ಹತ್ತಿರ ನೀನು ಹೋಗಬೇಡ."

" ಎಲ್ಲಾರಾ ಉಂಟಾ–ಸೌದೆ ಕಂತ್ರಾಟು ಮಾಡ್ತಾನಲ್ಲಾ ಸತ್ತಾರ್ ಅವನ್ನ ಕಳಿಸ್ಕೊಡ್ತೀನಿ."

" ಹಾಗೇ ಮಾಡು "

ಎಂದು ಅವನ ಕೈಗೆ ಸ್ವಲ್ಪ ಹಣ ಕೊಟ್ಟು,

" ನಾನು ಹತ್ತು ಹನ್ನೊಂದು ಗಂಟೆ ವೇಳೆಗೆ ಮೇಕೆದಾಟಿಗೆ ಬರುತ್ತೇನೆ ದಸ್ತಗೀರ್–ಚೆನ್ನೀಗೆ ಈ ವಿಷಯ ತಿಳಿಸು " ಎಂದ.

ಮೇಕೆದಾಟಿನಲ್ಲಿದ್ದ 'ಇನ್ಸ್‌ಪೆಕ್ಷನ್ ಲಾಡ್ಜ್'ನಲ್ಲಿ (Inspection Lodge) ದಸ್ತಗೀರ್ ಎಲ್ಲಾ ವ್ಯವಸ್ಥೆ ಮಾಡಿ ಧಣಿಯ ದಾರಿ ಕಾಯುತ್ತಿದ್ದ.

ಚೆನ್ನಿ–ಗಂಗಿ ಇಬ್ಬರೂ ಒಳಗೆ ಕುಳಿತಿದ್ದರು.

ಮೈಲಾರಯ್ಯ ಬರುತ್ತಿದ್ದುದನ್ನು ಕಂಡ ದಸ್ತಗೀರ್ ಚೆನ್ನೀಗೆ ಸುದ್ದಿ ಮುಟ್ಟಿಸಿ, ಧಣಿಯನ್ನೆದುರುಗೊಳ್ಳಲು ಹೋದ.

" ಬಂದಿದ್ದಾಳಾ ದಸ್ತಗೀರ್."

" ಜತೇಲೇ ಕರ್‍ಕೊಂಡು ಬಂದೆ."

" ಯಾರೂ ನೋಡಲಿಲ್ಲವೇ ?"

" ಒತ್ತು ಉಟ್ಟ್ಕೋ ಒತ್ಗೇ ಬಂದ್ಬುಟ್ಟೇ ಸರ್ಕಾರ್."

" ಸುಬ್ಬಯ್ಯ...."

" ಅಡಿಗೆ ಮಾಡ್ತಾವ್ನೆ."

" ಅದೂ...."

" ಚಿಕ್ತು ಸರ್ಕಾರ್–ಒಳಗೆ ಮಡಗಿದ್ದೀನಿ."

ಒಳಗೆ ಬಂದ ಮೈಲಾರಯ್ಯನನ್ನು ಭರದಿಂದಪ್ಪಿದ ಚೆನ್ನಿ ಅವನ ಭುಜದ ಮೇಲೆ ಮುಖವಿಟ್ಟು ಅಳುತ್ತಾ,

" ಬರ್‍ತೀನೀಂತ ಏಳಿದೋರು–ನೀವು ಬರ್‍ನೇಬ್ಯಾಡ್ವಾ" ಎಂದಳು.

" ನಾನು ಅಡಿಕೆ ಕತ್ತರೀಗೆ ಸಿಕ್ಕಿಕೊಂಡಿದ್ದೇನೆ ಚೆನ್ನಿ–ಸೋಲೂರಿಗಿಂತ ಈ ಊರು ಹೊಲಸು. ಅಲ್ಲಿ ಇದ್ದವನು ಒಬ್ಬನೇ–ಭರಮೇಗೌಡ; ಇಲ್ಲಿ ನೂರಾರು ಭರಮೇಗೌಡರಿದ್ದಾರೆ"

" ನಮ್ಮೂರಿಗೇ ಬಂದು ಬುಡಿ."

" ಮೇಲಧಿಕಾರಿಗಳು ನನ್ನ ಮಾತು ಕೇಳುತ್ತಾರೆಯೇ ಚೆನ್ನಿ–ನೀನು ಇಲ್ಲಿಗೆ ಯಾವಾಗ ಬಂದೆ."

" ಮೊನ್ನೆ–ಬಂದೋಳೇ ಟೇಶನ್ನಿಗೆ ಗಂಗೀನ ಕಳಿಸ್ದೆ."

" ದಸ್ತಗೀರ್ ಎಲ್ಲಾ ಹೇಳಿದ."

" ಬರಾಂದೀನೂ ತರಿಸಿಬುಟ್ಟಿದ್ದೀರಿ!"

" ನೀನು ಅಪರೂಪಕ್ಕೆ ಬಂದಿರುವಾಗ, ಸರಿಯಾಗಿ ಆತಿಥ್ಯ ಮಾಡ ಬೇಡವೇ?"

" ಸಾಕು–ಸುಮ್ಕಿರಿ–ಎಲ್ಲಾ ಬಿನ್ನಾಣ!"

ನೆಲದ ಮೇಲೆ ಹಾಸಿದ್ದ ಜಮಖಾನದ ಮೇಲೆ ಕುಳಿತು, ಇಬ್ಬರೂ ಪಾನ ಸಾಮಗ್ರಿಗಳನ್ನು ಅಣಿಮಾಡಿಕೊಂಡರು.

ಎರಡು ರೌಂಡ್ ಮುಗಿದ ಮೇಲೆ ಮೈಲಾರಯ್ಯ,

" ಜೈಲಿನ ಸಮಾಚಾರವೇನು ಚೆನ್ನಿ" ಎಂದು ಕೇಳಿದ.

" ಇನ್ನು ವರ್ಸಕ್ಕೆ ಬರ್‍ತಾನಂತೆ!"

" ಕಾಗದ ಬರೆದಿದ್ದಾನೆಯೇ?"

" ಬರದವ್ನೆ–ನಾನು ಓಗಿ ನೋಡ್ನಿಲ್ಲ ಎಂತಾ ಬೋದವ್ನೆ–ನಂಗ್ಯಾಕೋ ಬಯ ಆಗ್ತೈತೆ ಬುದ್ಧಿ."

" ಏಕೆ?"

" ಆ ರಾಕ್ಷಸ ಜೇಲ್ನಿಂದ ಬಂದ್ರೆ ನನ್ನ ಬುಡ್ತಾನಾ."

" ಏನು ಮಾಡಬಲ್ಲ?"

" ಜವನೀಗೆ ಆದಷ್ಟು..."

" ಅವನ ಉಸಿರೇ ಮೆತ್ತಗಾಗಿ ಹೋಗಿದೆ ಅವನಿಗಿನ್ನು ಯಾವುದಕ್ಕೂ ಧೈರ್ಯವಾಗಲ್ಲ ಚೆನ್ನಿ."

" ಎಂಗೆ ಏಳಾಕಾಗ್ತೈತೆ !"

" ನಿನಗೆ ಸ್ವಲ್ಪ ಅನುಮಾನ ಕಂಡು ಬಂದರೂ ಸೋಲೂರು ಇನ್ಸ್‌ಪೆಕ್ಟರಿಗೆ ಹೇಳಿಕಳಿಸು–ಅವರು ನನಗೆ ಬೇಕಾದವರು–ನಾನು ಎಲ್ಲಾ ಹೇಳಿರುತ್ತೇನೆ."

ತನ್ನ ಗ್ಲಾಸ್ ಕೆಳಗಿಟ್ಟ ಚೆನ್ನಿ, ಮೈಲಾರಯ್ಯನ ಬಳಿ ಸರಿದು ಲಲ್ಲೆ ಗರೆಯುತ್ತಾ,

" ನಿಮ್ನ ಬಿಟ್ಟಿರಾದು ಭೋ ಕಷ್ಟ ಆಗೈತೆ ದೊರೆ."

" ನಿನಗೂ ಕಷ್ಟ–ನನಗೂ ಕಷ್ಟ ! ಏನು ಮಾಡೋದು ಚೆನ್ನಿ."

" ನಾನು ಬಿಮ್ಮನಸೆ ಆದ್ರಾ ಏನ್ನತಿ ?"

" ಏಕೆ ?"

" ಗೌಡ ಬಂದ್ಮ್ಯಾಕೆ ಸುಮ್ಕಿರ್ತಾನಾ ?"

" ಸೂಚನೆ ಕಂಡು ಬಂದಿದೆಯೇ ?"

" ಇಲ್ಲ."

" ಹಾಗಾದರೆ ಇಲ್ಲದ ಭಯವೇಕೆ ?"

ನಸುನಾಚಿದ ಚೆನ್ನಿ, ಮೈಲಾರಯ್ಯನನ್ನಪ್ಪಿ,

" ಮನಸು ಬಿಚ್ಚಿ ಏಳ್ಲಾ ?"

" ಹೇಳು "

" ನಗ್ಬಾರಾ ಮಾಡ್ಕೊಡ್ಟು."

" ಇಲ್ಲ ಹೇಳು."

" ಈ ಊರಿಗೆ ನಾನು ಯಾಕ್ಬಂದೆ ಗೊತ್ತಾ ?"

" ಏಕೆ ?"

" ಬಿಮ್ಮನಸೆ ಆಗಾಕೆ ? ಒಂಟಿ ಪಿಸಾಸಿ ಅಂಗಿರೋದು ನನ್ಕೈಲಿ ಆಗಾಕಿಲ್ಲ. ನನ್ನದೂ ಒಂದು ಮಗಾ ಇದ್ದರೆ...."

" ನಿನ್ನ ಆಸೆ ನ್ಯಾಯವಾದದ್ದೇ....ಆದರೆ...."

" ಏನಾರಾ ಆಗ್ಲಿ–ನಾನು ಎದರ್ವಾಕಿಲ್ಲ !"

" ಯಾವದೂ ನಮ್ಮ ಕೈಯಲ್ಲಿಲ್ಲ ಚೆನ್ನಿ–ದೇವರು ಕಣ್ಣುಬಿಟ್ಟು ನೋಡ ಬೇಕು "

ಎಂದು ಗ್ಲಾಸುಗಳನ್ನು ಭರ್ತಿಮಾಡಿದ.

ಸಂಜೆಯವರೆಗೂ ಚೆನ್ನಿಯೊಂದಿಗಿದ್ದ ಮೈಲಾರಯ್ಯ ಹೊರಟು ನಿಂತು,

" ದಸ್ತಗೀರ್ ನಿನ್ನ ಕರ್ಕೊಂಡು ಹೋಗುತ್ತಾನೆ ಚೆನ್ನಿ."

" ತಿರುಗಾ ನಿಮ್ನ ನೋಡಾದು ?"

" ನಾನೇ ಸೋಲೂರಿಗೆ ಬರುತ್ತೇನೆ "

" ಸುಳ್ಳು–ನೀವು ಬರಾಕಿಲ್ಲ."

" ಇಲ್ಲ–ಖಂಡಿತ ಬರುತ್ತೇನೆ. ನನ್ನ ತಮ್ಮನ ಹೆಂಡತಿ ಬಸುರಿ–ಅವಳನ್ನು ನೋಡುವುದಕ್ಕೆ ನಾನೂ ನನ್ನ ಹೆಂಡತಿ ಹೋಗಬೇಕಾಗಿದೆ."

" ಬಂದ್ರೆ ಏಸು ದೀಸ ಇರ್‍ತೀರಿ."

" ನಾಲ್ಕೈದು ದಿನ ಇರುತ್ತೇನೆ."

" ಊಹೂ–ಒಂದು ತಿಂಗಳು ಇರ್‍ಬೇಕು."

" ಅಷ್ಟು ದಿವಸ ರಜಾ ಸಿಕ್ಕಬೇಕಲ್ಲ–ಅಲ್ಲದೆ ತಿಂಗಳು ಗಟ್ಟಳೆ ಬೀಗರ ಮನೆಯಲ್ಲಿ ಕುಳಿತಿರುವುದಕ್ಕಾಗುತ್ತದೆಯೇ ?"

" ನಾನು ತಿರುಗಾ ನಿಮ್ನ ನೋಡ್ದೇನೇ ಓಗ್ಬೇಕಾ ?"

" ಹೋಗಬೇಕಾಗಿದೆ."

" ಯಾವಾಗ ಬತ್ತೀರಿ."

" ಈ ತಿಂಗಳ ಕೊನೆಗೆ "

" ನನ್ನಮ್ಯಾಕೆ ಆಣೆ ಮಾಡಿ ಏಳಿ."

" ನಿನ್ನಾಣೆಗೂ ಬರ್‍ತೀನಿ ಚೆನ್ನಿ "

ಎಂದು ಅವಳನ್ನು ಸಂತೈಸಿ ಹೊರಟುಬಿಟ್ಟ.

# ೧೭

ಅತ್ತಿಗೆ, ಅಣ್ಣನನ್ನು ಕಾಣಲು ಬಂದ ಶಾಮುನನ್ನು ಜಾನಕಮ್ಮ ಅತ್ಯಾದರ ದಿಂದ ಸ್ವಾಗತಿಸಿದಳು. ಪುತ್ರಸಮಾನನಾದ ಮೈದುನನಿಗೆ ಎಷ್ಟು ಉಪಚಾರ ಮಾಡಿದರೂ ಅವಳ ಮನಸ್ಸಿಗೆ ತೃಪ್ತಿಯಿಲ್ಲವಾಯಿತು.

ಅದೇ ರಾತ್ರಿ ಊಟಕ್ಕೆ ಎಲ್ಲರೂ ಕುಳಿತಿದ್ದಾಗ, ಶಾಮು ತನ್ನ ಮಾವ ನವರ ಸಂದೇಶ ಮುಟ್ಟಿಸಿದ.

" ವೆಂಕಣ್ಣನವರು ನನಗೂ ಕಾಗದ ಬರೆದಿದ್ದಾರೆ ಶಾಮು ಎಷ್ಟು ಹೊತ್ತಿಗೆ ಸುಭದ್ರನನ್ನು ಕಂಡೇನೋ ಎಂದು ಅವಳೂ ಕುಣಿಯುತ್ತಿದ್ದಾಳೆ."

" ನೀನೂ ಅತ್ತಿಗೆ ಹೋಗಲೇಬೇಕಣ್ಣಾ !"

" ಹೋಗುವುದಕ್ಕೆ ನನಗೂ ಮನಸ್ಸಿದೆಯಪ್ಪ–ನಿನ್ನ ಮಾವನವರ ಕಾಗದ ಬಂದ ಕೂಡಲೆ ರಜಕ್ಕೂ ಬರೆದುಹಾಕಿದ್ದೇನೆ. ರಜಾ ಸ್ಯಾಂಕ್ಷನ್ (Sanction) ಆಗುವವರೆಗೆ ಹೇಗೆ ಹೊರಡಲಿ ?"

" ಪೋಲೀಸ್ ಡಿಪಾರ್ಟ್‌ಮೆಂಟ್ ಉದ್ಧಾರಮಾಡುವುದಕ್ಕೇ ಇವರು ಹುಟ್ಟಿದ್ದಾರೆ. ಶಾಮೂ "

ಎಂದು ಜಾನಕಮ್ಮ ನಗೆಯಾಡಲು, ಮೈಲಾರಯ್ಯ,

" ನೀನೇ ನೋಡುತ್ತಿದ್ದೀಯಲ್ಲ ಜಾನಕಿ–ನನಗೆ ಪುರಸತ್ತೆಲ್ಲಿದೆ ಹೇಳು. ನೀನು ಬೇಕಾದರೆ ಹೋಗು–ಶಾಮು ನಿನ್ನ ಕರೆದುಕೊಂಡು ಹೋಗಿ ನೋಲೂರಿನಲ್ಲಿ ಬಿಟ್ಟು ಬರುತ್ತಾನೆ."

" ನೀವು ಬರದೆ ನಾನೂ ಎಲ್ಲಿಗೂ ಹೋಗುವುದಿಲ್ಲ "

ಎಂದು ಜಾನಕಮ್ಮ ಹಟ ಹಿಡಿದಳು.

" ಒಳ್ಳೇ ಮೊಂಡಿ ಸಹವಾಸವಾಯಿತಲ್ಲಾ !"

ಎಂದು ನುಡಿದ ಮೈಲಾರಯ್ಯ,

" ಇವತ್ತು ಬುಧವಾರ–ಶನಿವಾರ ಹೊರಟುಬಿಡೋಣ ಕಣೇ."

"ಹಾಗೆ ಬನ್ನಿ ದಾರೀಗೆ–ನನಗೆ ಬೆಂಗಳೂರಿನಲ್ಲಿ ಅರ್ಧ ದಿವಸದ ಕೆಲಸ ಇದೆ."

"ಏನು ರಾಜಕಾರ್ಯ"

"ಬೀಗರ ಮನೆಗೆ ಬರೀಗೈಯಲ್ಲಿ ಹೇಗೆ ಹೋಗೋದೂಂದ್ರೆ–ಅದೂ ಬಸುರಿ ಹುಡುಗಿ ನೋಡೋದಿಕ್ಕೆ."

"ದುಡ್ಡು ಬೇಕೇನೋ?"

"ಬೇಡ–ಬೆಂಗಳೂರಿನಲ್ಲಿ ಅಂಗಡಿ ಇಟ್ಟಿರೋರೆಲ್ಲಾ ನನ್ನ ಸೋದರ ಮಾವಂದಿರು."

"ಎಷ್ಟು ಬೇಕು ಹೇಳೀ ಮಾರಾಯಿತಿ–ಹಣ ಹೊಂದಿಸಿಕೊಳ್ಳುತ್ತೇನೆ."

"ಸುಭದ್ರಂಗೆ ಒಂದು ಸೀರೆ–ಕಣ; ಬೀಗಿತ್ತಿಗೆ ಒಂದು ಒಳ್ಳೆ ಕಣ. ತುಂಬ ಹೂವು, ಹಣ್ಣು, ತರಕಾರಿ, ತಿಂಡಿ ಸಾಮಾನು!"

"ನಿನಗೆ?"

"ನೋಡಿ–ದೇವರು ನಿಮಗೆ ಒಳ್ಳೆಯ ಬುದ್ಧಿ ಕೊಟ್ಟರೆ ನನಗೂ ಒಂದು ಸೀರೆ ತೆಗೆದುಕೊಡಿ."

"ಕೇಳಿದೆಯಾ ಶಾಮೂ–ದೇವರು ನನಗೆ ಒಳ್ಳೆಯ ಬುದ್ಧಿ ಕೊಡಬೇಕಂತೆ! ಇವಳು ನನ್ನಲ್ಲಿ ಏನು ಕೆಟ್ಟ ಬುದ್ಧಿ ಕಂಡಳೋ?"

"ಯಾರಿಗೆ ಗೊತ್ತು–ಗಂಡಸ್ರು ಹೊರಗೆ ಏನು ಏನು ಮಾಡಿ ಕೊಳ್ತೀರೋ?"

"ಅಪನಂಬಿಕೆಗೂ ಹೆಣ್ಣು ಜಾತೀಗೂ ಗಂಟು ಕಣೋ ಶಾಮು"

"ಸುಳ್ಳಿಗೂ ಗಂಡುಜಾತೀಗೂ ಗಂಟು ಕಣೋ ಶಾಮು."

ಗಂಡ ಹೆಂಡಿರ ಪ್ರೇಮಕಲಹ ನೋಡುತ್ತಿದ್ದ ಶಾಮು ಗಹಗಹಿಸಿ ನಕ್ಕು,

"ಅತ್ತಿಗೇನ ನೀನು ಸೋಲಿಸೋದಿಕ್ಕೆ ಸಾಧ್ಯವಿಲ್ಲ ಕಣಣ್ಣಾ."

"ಅದಕ್ಕೇ ಸೋಲೂರಿಗೆ ಟ್ರಾನ್ಸ್‌ಫರ್ ಮಾಡಿಸಿಕೊಂಡಿದ್ದೆನಪ್ಪಾ."

ಜಾನಕಿ ನಗುತ್ತಾ,

"ಬರಬರುತ್ತಾ ಇವರು ಸಾಹಿತಿಗಳಾಗುತ್ತಿದ್ದಾರೆ ಶಾಮು" ಎಂದಳು.

ಶನಿವಾರ ಮೈಲಾರಯ್ಯ, ಹೆಂಡತಿ, ತಮ್ಮ, ದಸ್ತಗೀರ್‌ನೊಂದಿಗೆ ಬೆಂಗಳೂರಿಗೆ ಪ್ರಯಾಣ ಬೆಳೆಸಿದ.

ನಂಜೆ ಗಂಡನನ್ನು ಜತೆಯಲ್ಲಿ ಕರೆದುಕೊಂಡು ಹೋದ ಜಾನಕಮ್ಮ, ತನಗೆ ಬೇಕಾದುದೆಲ್ಲವನ್ನೂ ಕೊಂಡಳು. ಶಾಮುನನ್ನು ಬೆಂಗಳೂರಿನಲ್ಲೇ

ಬಿಟ್ಟು, ಉಳಿದವರು ಮಾರನೆಯ ಬೆಳಿಗ್ಗೆಯ ಬಸ್ಸಿನಲ್ಲಿ ಹೊರಟು ಹತ್ತು ಗಂಟೆಯ ವೇಳೆಗೆ ಸೋಲೂರು ತಲುಪಿದರು.

ಬಾಗಿಲ ಬಳಿ ಬಂದು ನಿಂತ ಸುಭದ್ರನನ್ನು ಜಾನಕಮ್ಮ ಅಪ್ಪಿ, ಆಪಾದ ಮಸ್ತಕ ಅವಳನ್ನು ನೋಡಿ ಸಂತೋಷ ವ್ಯಕ್ತಮಾಡಿದಳು

ವೆಂಕಣ್ಣನವರ ಆನಂದಕ್ಕೆ ಪಾರವೇ ಇಲ್ಲವಾಯಿತು.

"ನೀವು ಬರುವುದು ನನಗೆ ಅನುಮಾನವಾಗಿತ್ತು–ದೊಡ್ಡ ಮನಸ್ಸು ಮಾಡಿ ಬಂದರಲ್ಲಾ !"

"ನಾನು ಡ್ಯೂಟಿ ಮೇಲೆ ಬರಲೇ ಬೇಕಾಯಿತು ವೆಂಕಣ್ಣನವರೇ– ಸ್ವಾಮಿಕಾರ್ಯ ಸ್ವಕಾರ್ಯ ಎರಡೂ ಆಗುತ್ತದೆಯೆಂದು ಈಗಲೇ ಹೊರಟುಬಿಟ್ಟೆ."

"ಇಲ್ಲಿಯೂ ಡ್ಯೂಟಿಯೇ ?"

"ಇನ್ನೂ ಭರಮೇಗೌಡನ ಪ್ರಕರಣ ಮುಗಿದಿಲ್ಲ ವೆಂಕಣ್ಣನವರೇ. ಜೈಲಿನಿಂದ ಅವನು ಚೆನ್ನಮ್ಮನಿಗೆ ಯದ್ವಾತದ್ವಾ ಕಾಗದ ಬರೆಯುತ್ತಿದ್ದಾನೆ. ಅವಳು ಕಂಪ್ಲೇಂಟ್ (Complaint) ಕೊಟ್ಟಿದ್ದಾಳೆ. ಅದರ ಇನ್‌ವೆಸ್ಟಿಗೇಷನ್ (investigation) ಮಾಡಿ ನಾನು ರಿಪೋರ್ಟ್ ಮಾಡಬೇಕಾಗಿದೆ."

"ಆ ಚಂಡಾಲ ಯಾವದಕ್ಕೂ ಹೇಸುವುದಿಲ್ಲ ಮೈಲಾರಯ್ಯ. ಜವನೀನ ಯಮಲೋಕಕ್ಕೆ ಕಳಿಸಿದ ಹಾಗೆ ಚೆನ್ನೀನೂ ಕಳಿಸಿಬಿಡುತ್ತಾನೋ ಏನೋ ?"

"ಚೆನ್ನಿ ಅನುಮಾನ ನಿಜವಾದರೆ ನಾನು ಭರಮೇಗೌಡನನ್ನು ಖೂನೀಗೆ ಚಾರ್ಜ್ (Charge) ಮಾಡಿಸಿಬಿಡುತ್ತೇನೆ."

"ಸದ್ಯ ನಿಮ್ಮ ರಕ್ಷಣೆ ನೋಡಿಕೊಳ್ಳಿಯಪ್ಪ."

"ನನ್ನ ಅವನು ಏನು ಮಾಡಬಲ್ಲ !"

ಎಂದು ಹೊರಗೆ ಹೋಗಿ ದಸ್ತಗೀರನನ್ನು ಹತ್ತಿರ ಕರೆದು,

"ಮೂರುನಾಲ್ಕು ಗಂಟೆಗೆ ನಾನು ಬರುತ್ತೇನೆ ಎಂದು ಚೆನ್ನಿಗೆ ತಿಳಿಸಿ ಬಾ ದಸ್ತಗೀರ್" ಎಂದ.

ಸ್ನಾನ, ಊಟ ಮುಗಿದ ಮೇಲೆ ಸ್ವಲ್ಪ ವಿಶ್ರಮಿಸಿಕೊಂಡು, ಮೇಲಕೆದ್ದು ಬಟ್ಟೆ ಧರಿಸುತ್ತಿದ್ದ ಗಂಡನನ್ನು ನೋಡಿದ ಜಾನಕಮ್ಮ,

"ಇದೇನು ಹೊರಟುಬಿಟ್ಟಿರಿ ?" ಎಂದಳು.

"ಒಂದೆರಡು ಕಂಪ್ಲೇಂಟ್ ಬಂದಿದೆ ಕಣೇ–ನೋಡಿಕೊಂಡು ಬರ್ತೀನಿ."

"ಓಹೋ ! ಇಲ್ಲೂ ಕೆಲಸ ಗಂಟು ಹಾಕಿಕೊಂಡೇ ಬಂದಿದ್ದೀರಿ."

"ಗಂಟು ಹಾಕಿಕೊಳ್ಳದಿದ್ದರೆ ರಜಾ ಸಿಕ್ಕುತ್ತಿತ್ತೇ ?"

“ ಸರಿ–ಎಷ್ಟು ಹೊತ್ತಿಗೆ ಬರುತ್ತೀರಿ ?”

“ ಸಂಜೆಗೆ ಬರುತ್ತೀನೆ–ಏಕೆ ? ನಾನು ಬೇಗ ಬಂದು ಇಲ್ಲೇನು ಮಾಡಬೇಕು ?”

“ ಸುಭದ್ರನಿಗೆ ಹೊಸ ಸೀರೆ ಉಡಿಸಿ, ನಾಲ್ಕು ಮನೆ ಕರೆದು ಒಂದು ಆರತಿ ಮಾಡಬೇಕೆಂದಿದ್ದೇನೆ. ನೀವೇ ಇಲ್ಲದಿದ್ದರೆ....”

“ ನಾನೇನು ಆರತಿ ಹಾಡು ಹೇಳಬೇಕೆ ?”

“ ಹೋಗ್ರಿ–ನಿಮಗೊಂದೂ ಆಸ್ಥೆ ಅಕರಾಸ್ತೆ ಇಲ್ಲ–”

“ ಇವತ್ತು ತಾನೇ ಬಂದಿದ್ದೀ–ನಿನಗೂ ಆಯಾಸವಾಗಿದೆ. ಆರತಿ ಇವತ್ತು ಬೇಡ–ನಾಳೆಯೋ ನಾಡಿದ್ದೋ ಇಟ್ಟುಕೋ–ನಾಲ್ಕು ಮನೆ ಏಕೆ–ಹತ್ತು ಮನೆ ಕರೆದು ಚೆನ್ನಾಗಿಯೇ ಮಾಡು.”

ಗಂಡನ ಸಲಹೆಯನ್ನಂಗೀಕರಿಸಿದ ಜಾನಕಮ್ಮ ನಸುನಗುತ್ತ,

“ ನೀವು ಎಲ್ಲಾ ಸರಿ–ಆದರೆ ಸ್ವಲ್ಪ....”

“ ಏನು ಸ್ವಲ್ಪ ?”

“ ಸ್ಕ್ರೂ ಲೂಸ್ (Screw loose).”

“ ಕತ್ತೆ–ಒಳ್ಳೆಯ ಮಾತಿನಲ್ಲಿ ನನ್ನ ಬಯ್ತೀಯಾ ?”

“ ಇದೆಲ್ಲಾ ನಿಂದಾಸ್ತುತಿ ಕಣ್ರೀ ”

ಎಂದು ಜಾನಕಮ್ಮ ನಕ್ಕಳು.

# ೧೮

ಜಾನಕಮ್ಮ ಒಬ್ಬಳೇ ಆರತಿ ಅಕ್ಷತೆ ಮಾಡುವುದಕ್ಕೆ ಅಂಬಮ್ಮ ಬಿಡಲಿಲ್ಲ. ಇಬ್ಬರೂ ಸೇರಿಕೊಂಡು ಉತ್ಸವವನ್ನು ದೊಡ್ಡ ಪ್ರಮಾಣದಲ್ಲಿಯೇ ಏರ್ಪಡಿಸಿದರು.

ತಾನು ತಂದಿದ್ದ ಹೊಸ ಸೀರೆಯನ್ನೇ ಉಡಿಸಿ, ವಾರಗಿತ್ತಿಯನ್ನು ಹಸೆಯ ಮೇಲೆ ಕೂಡಿಸಿ, ಕಣ್ತುಂಬ ನೋಡಿ ಜಾನಕಮ್ಮ ಆನಂದಿಸಿದಳು.

ಮೂರನೆಯ ದಿನ ಊರಿನ ಇಷ್ಟಮಿತ್ರರನ್ನೆಲ್ಲಾ ಕರೆದು ವೆಂಕಣ್ಣನವರು, ಬೀಗರಿಗೆ ಔತಣ ಮಾಡಿದರು.

ಮೈಲಾರಯ್ಯನ ರಜವೂ ಮುಗಿಯುತ್ತ ಬಂದಿತ್ತು-ಸೋಲೂರಿನ 'ಡ್ಯೂಟಿ' ಯನ್ನವನು ಮುಗಿಸಿ ಊರಿಗೆ ಹೊರಡಲೇಬೇಕಾಗಿತ್ತು.

ಸುಭದ್ರೆಯನ್ನು ಸಂತೈಸುವುದೇ ಜಾನಕಮ್ಮನಿಗೆ ದೊಡ್ಡ ಕೆಲಸವಾಯಿತು.

"ಆ ಹೊತ್ತಿಗೆ ನೀವು ಖಂಡಿತ ಬರಬೇಕಕ್ಕಾ ?" ಎಂದು ಸುಭದ್ರಾ ಅಂಗಲಾಚಿದಳು.

"ಖಂಡಿತ ಬರುತ್ತೇನೆ ಕಣೇ-ಯೋಚಿಸಬೇಡ. ಸಂತೋಷವಾಗಿರು. ಶಾಮೂಗೆ ನಾನು ಹೇಳಿ ಹೋಗುತ್ತಾನೆ. ಮೇಲಿಂದ ಮೇಲೆ ಅವನೂ ಬಂದು ನೋಡಿಕೊಂಡು ಹೋಗುತ್ತಾನೆ. ನಿನಗೆ ಏನಾದರೂ ಬೇಕಾದರೆ ನನಗೆ ಬರಿ-ನಾನು ಕಳಿಸಿಕೊಡುತ್ತೇನೆ."

"ಹಾಗೇ ಆಗಲಿ"

ಎಂದು ಯೋಚಿಸುತ್ತಿದ್ದ ಸುಭದ್ರಾ,

"ನನಗೆ ಆಗಿರುವುದು ನಿಮಗಾಗಿದ್ದರೆ ಎಷ್ಟು ಚೆನ್ನಾಗಿತ್ತು ಅಕ್ಕಾ."

"ಅವರವರು ಕೇಳಿಕೊಂಡು ಬಂದದ್ದು ಅವರಿಗೆ ಸುಭದ್ರಾ-ಯಾರಿಗಾದರೇನು ? ಮನೆ ಹೆಸರು ಉಳಿಸುವುದಕ್ಕೆ ಒಬ್ಬ ವಂಶೋದ್ಧಾರಕ ಇದ್ದರಾಯಿತು."

"ನಾವೂ ನೀವೂ ಒಟ್ಟಿಗೆ ಇದ್ದಿದ್ದರೆ...."

"ಚೆನ್ನಾಗಿತ್ತು-ಆದರೇನು ಮಾಡುವುದು ಹೇಳು. ಪೋಲೀಸ್ ಡಿಪಾರ್ಟ್

ಮೆಂಟಿನವರು ಅವರನ್ನು ಒಂದು ಕಡೆ ಬಾಳಿಸುತ್ತಾರೆಯೇ ? ಈಗ ಮತ್ತೆ ವರ್ಗವಂತೆ !"

" ಎಲ್ಲಿಗೆ ?"

" ಕೊಂಕಣಕ್ಕೋ ಮೈಲಾರಕ್ಕೋ !–ಬೆಂಗಳೂರಿಗೇ ಹೋಗುವುದಕ್ಕೆ ಹರಪ್ರಯತ್ನ ಮಾಡತ್ತಾ ಇದ್ದೀನಿ ಎಂದು ಹೇಳಿದರು."

" ಭಾವನವರಿಗೆ ಬೆಂಗಳೂರಿಗೇ ವರ್ಗವಾಗಲಿ ಎಂದು ನಾನು ತುಂಬ ' ಹೂ ' ಪೂಜೆ ಮಾಡ್ತೀನಕ್ಕಾ" ಎಂದಳು.

ಬೆಳಿಗ್ಗೆ ಹೊರಡುವುದೆಂದು ನಿಶ್ಚಯವಾಯಿತು.

ಅಂಬಮ್ಮ ಬೀಗಿತ್ತಿಗೆ ರವಿಕೆಯ ಕಣವಿಟ್ಟು ತಾಂಬೂಲವಿತ್ತರು.

ವೆಂಕಣ್ಣನವರು ರಂಗಣ್ಣ ಬಸ್ ನಿಲ್ದಾಣದವರೆಗೆ ಬಂದು ಬೀಗರು, ಬೀಗಿತ್ತಿಯನ್ನು ಬೀಳ್ಕೊಟ್ಟರು.

ಮೈಲಾರಯ್ಯ ಊರು ತಲಪುವ ವೇಳೆಗೆ ರಾಶಿ ರಾಶಿ ಫೈಲುಗಳು ಮೇಜಿನ ಮೇಲೆ ಶಿಖರವಾಗಿದ್ದವು.

ಅವನು ಸಬ್–ಇನ್ಸ್‌ಪೆಕ್ಟರ್ ಶಂಕರಪ್ಪನಿಂದ ಚಾರ್ಜ್ ( charge) ವಹಿಸಿಕೊಂಡು,

" ಇನ್ನೇನು ಸಮಾಚಾರ ಶಂಕರಪ್ಪ" ಎಂದ.

" ರಾತ್ರಿ ಒಂದು ಲಾರಿ, ಬೆಂಗಳೂರಿನಿಂದ ಇಲ್ಲಿಗೆ ಬಹಳ ಓಡಾಡುತ್ತಾ ಇದೆ ಸಾರ್."

" ಯಾರದ್ದು ಅದು."

" ಯಾವನೋ ನಂಜಪ್ಪನದಂತೆ !"

" ಲಾರಿ ಲೈಸನ್ಸ್, ಡ್ರೈವರ್‍ಸ್ ಲೈಸನ್ಸ್ ಎಲ್ಲಾ ಚೆಕ್ ಮಾಡಿದಿರಾ ?"

" ಮಾಡಿದೆ–ಎಲ್ಲಾ ಕ್ರಮವಾಗಿದೆ."

" ಸರಿ–ಸಿಕ್ಕಿದ ಟೈಮ್‌ನಲ್ಲಿ ಲಾರಿ ಓಡಿಸಿದರೆ ಚಾರ್ಜ್ ಮಾಡ್ತೀನಿ ಎಂದು ಡ್ರೈವರಿಗೆ ವಾರ್ನ್ (warn ) ಮಾಡಿಬಿಡಿ."

" ಅವೇಳೆಯಲ್ಲಿ ಲಾರಿ ಓಡಾಡುತ್ತಿರುವುದಲ್ಲದೆ ಕಳ್ಳಮಾಲು, ಮದ್ಯ ಸಾಗಿಸುತ್ತಿದೆ ಸಾರ್."

" ಇದು ಹೇಗೆ ಗೊತ್ತಾಯಿತು."

" ಮಿಲ್ಟ್ರಿ ಹೋಟೆಲ್ ಕಾಳಪ್ಪ ಹೆದರಿಕೊಂಡು ಬಾಯಿ ಬಿಟ್ಟುಬಿಟ್ಟ."

" ಮಾಲು ಯಾರದಂತೆ ?"

" ದೊಡ್ಡೇಗೌಡರದಂತೆ !"

" ಲಾರಿಯನ್ನು ಸೀಜ್ (seize) ಮಾಡಿಬಿಡಬೇಕಾಗಿತ್ತು."

" ದೊಡ್ಡೇಗೌಡರನ್ನ ಕೆಣಕಿದರೆ ನಮ್ಮ ತಲೆ ಉಳಿಯುತ್ತೆಯೇ ಸಾರ್."

" ಸರಿ–ನಾನು ಊರಿಗೆ ಬಂದಿದ್ದೇನಲ್ಲಾ–ಇನ್ನು ಭಯಪಡಬೇಡಿ. ಲಾರಿಯಲ್ಲಿ ಕಳ್ಳಮಾಲು, ಮದ್ಯ ಇದೆಯೇ ಇಲ್ಲವೇ ಎಂಬುದನ್ನು ಖಚಿತ ಮಾಡಿಕೊಂಡು ಸೀಜ್ ಮಾಡಿಬಿಡಿ–ನಾನು ನೋಡಿಕೊಳ್ಳುತ್ತೇನೆ."

" ಹಾಳಾಗಿ ಹೋಗಲಿ ಬಿಡಿಸಾರ್. ನಮಗೇಕೆ ಇಲ್ಲದ ತಾಪತ್ರಯ."

" ನಿಮ್ಮ ಡ್ಯೂಟಿ ನೀವು ಮಾಡುವುದಕ್ಕೆ ಹೆದರುತ್ತೀರ ಶಂಕರಪ್ಪ."

" ನಾನು ಜುಜುಬಿ ಮನುಷ್ಯ ಸಾರ್–ನೀವು ನಾಳೆ ಎ. ಎಸ್. ಪಿ. ಆಗೋರು."

" ಎ. ಎಸ್. ಪಿ. ಪಟ್ಟ ನನಗೆ ತಪ್ಪಿದರೂ ಚಿಂತೆಯಿಲ್ಲ. ನಾನು ಡ್ಯೂಟಿಗೆ–ನನ್ನ ಸ್ಥಾನಕ್ಕೆ ಅನ್ಯಾಯ ಮಾಡೋದಿಲ್ಲ"

" ತಾವು ಆರ್ಡರ್ ಮಾಡಿದ ಮೇಲೆ ಪರಿಪಾಲಿಸಬೇಕಾದದ್ದು ನನ್ನ ಕರ್ತವ್ಯ. ಇನ್ನೂ ಒಂದು ವಾರ ನೋಡಿ ಸೀಜ್ ಮಾಡ್ತೀನಿ ಸಾರ್."

" ಹಾಗೇ ಆಗಲಿ."

" ರಾಮಣ್ಣಗೌಡರು ಬಂದಿದ್ದರು."

" ಏನಂತೆ ?"

" ಟೂರಿಂಗ್ ಟಾಕೀಸ್‌ನವರಿಂದ ಸ್ಕೂಲಿಗೆ ಒಂದು ಬೆನಿಫಿಟ್ ತೆಗೆದು ಕೊಂಡಿದ್ದಾರಂತೆ–ಟಿಕೆಟ್ ಮಾರಿಸಿಕೊಟ್ಟರೆ ಉಪಕಾರವಾಗತ್ತೆ ಎಂದು ಹೇಳಿದರು."

" ಟಿಕೆಟ್ಟುಗಳನ್ನು ಕೊಟ್ಟು ಹೋಗಿದ್ದಾರೆಯೇ ?"

" ಕೊಟ್ಟಿದ್ದಾರೆ ಸಾರ್–ಡ್ರಾಯರ್‌ನಲ್ಲಿ ಹಾಕಿದ್ದೇನೆ."

" ಅವರು ಕೊಟ್ಟಿರುವಷ್ಟು ಟಿಕೆಟ್ಟನ್ನೂ ಮಾರಿಸಬೇಕು ಶಂಕರಪ್ಪ–ರಾಮಣ್ಣಗೌಡರು ದೊಡ್ಡ ಮನುಷ್ಯರು–ಅವರಿಗೆ ಸಹಾಯ ಮಾಡಬೇಕಾದುದು ನಮ್ಮ ಧರ್ಮ."

" ಹೌದು ಸಾರ್. ನನ್ನದೂ ಅದೇ ಅಭಿಪ್ರಾಯ" ಎಂದ.

ಇನ್ಸ್‌ಪೆಕ್ಟರು, ಸಬ್ ಇನ್ಸ್‌ಪೆಕ್ಟರು, ಕಾನಿಸ್ಟೇಬಲ್‌ಗಳೂ ಸಿನೀಮಾ ಟಿಕೆಟ್‌ಗಳನ್ನು ಮಾರಲಾರಂಭಿಸಿದರು.

ವೈಲಾರಯ್ಯನ ಮೇಲೆ ಕೋಪಗೊಂಡ ದೊಡ್ಡೇಗೌಡ ಐ. ಜಿ. ಸಾಹೇಬರಿಗೆ 'ಮೂಕರ್ಜಿ' ಬರೆಸಿ ಹಾಕಿಸಿದ.

'ಕವಿರತ್ನ ಕಾಳಿದಾಸ' ಬೆನಿಫಿಟ್ ಸಿನೀಮಾ ಪ್ರದರ್ಶನ ರಾಮಣ್ಣ

ಗೌಡರಿಗೆ ಲಾಭದಾಯಕವಾಯಿತು. ಮೈಲಾರಯ್ಯ, ಅವನ ಸಿಬ್ಬಂದಿಯವರೇ ಒಂದೂವರೆ ಸಾವಿರ ರೂಪಾಯಿ ಟಿಕೆಟ್ ಮಾರಿದ್ದರು. ನಿವ್ವಳವಾಗಿ ಮೂರು ಸಾವಿರ ರಾಮಣ್ಣಗೌಡರ ಕೈಸೇರಿತು.

ರಾಮಣ್ಣಗೌಡರು ಪ್ರದರ್ಶನಾನಂತ್ಯದಲ್ಲಿ ಮೈಲಾರಯ್ಯನ ಉಪಕಾರ ಸ್ಮರಿಸಿ, ಅವನಿಗೆ ಹಾರತುರಾಯಿ ಅರ್ಪಿಸಿದರು.

ಒಂದು ವಾರ ಕಳೆದ ಕೂಡಲೆ ಶಂಕರಪ್ಪ ಲಾರಿಯನ್ನು ಸೀಜ್‌ಮಾಡಿ, ಪೋಲೀಸ್ ಸ್ಟೇಷನ್ನಿನ ಮುಂದೆ ನಿಲ್ಲಿಸಿ, ಮೈಲಾರಯ್ಯನ ಮನೆಗೆ ಬಂದು ಸುದ್ದಿ ಮುಟ್ಟಿಸಿದ.

" ಲಾರೀಗೆ ಬಲವಾದ ಕಾವಲು ಹಾಕಿದ್ದೀರೋ ಇಲ್ಲವೋ ?"

" ಹಾಕಿದ್ದೇನೆ ಸಾರ್–ನಾನೂ ಸ್ಟೇಷನ್ನಿನಲ್ಲೇ ಮಲಗುತ್ತೇನೆ."

" ಒಳ್ಳೆಯದು "

ಎಂದು ಮೈಲಾರಯ್ಯ ಸಬ್ ಇನ್ಸ್‌ಪೆಕ್ಟರ ಕರ್ತವ್ಯನಿಷ್ಠೆಯನ್ನು ಶ್ಲಾಘಿಸಿದ.

ರಾತ್ರಿ ಸುಮಾರು ಎರಡು ಗಂಟೆಯಿರಬಹುದು.

ಯಾರೋ ಬಂದು ಮೈಲಾರಯ್ಯನ ಮನೆ ಬಾಗಿಲು ತಟ್ಟಿದರು.

ಗಾಬರಿಗೊಂಡು ಮೇಲಕ್ಕೆದ್ದ ಜಾನಕಮ್ಮ,

" ನೀವೊಬ್ಬರೇ ಹೊರಗೆ ಹೋಗಬೇಡ್ರಿ " ಎಂದಳು.

ಮೈಲಾರಯ್ಯ ಕೋಟು ಧರಿಸಿ. ಕಿಸೆಯಲ್ಲಿ ರಿವಾಲ್ವರನ್ನು ಇಟ್ಟುಕೊಂಡು ಹೊರಗೆ ಬಂದ.

ವೆರಾಂಡವಲ್ಲಿ ನಿಂತಿದ್ದ ದೊಡ್ಡೇಗೌಡ, ಲಿಂಗಣ್ಣ ನಮಸ್ಕರಿಸಲು, ಪ್ರತಿ ನಮಸ್ಕಾರಮಾಡಿದ ಮೈಲಾರಯ್ಯ,

" ಇದೇನು ಗೌಡರೇ–ಇಷ್ಟು ಹೊತ್ತಿನಲ್ಲಿ...." ಎಂದ.

" ಬರಬೇಕಾಯ್ತು ಸ್ವಾಮಿ. ನಿದ್ರೆ ಹೋಗ್ತಾ ಇದ್ದರೇನೋ–ತೊಂದರೆ ಕೊಟ್ಟೆವು."

" ಚಿಂತೆಯಿಲ್ಲ ಹೇಳಿ–ಕುಳಿತುಕೊಳ್ಳಿ."

ವೆರಾಂಡದಲ್ಲಿದ್ದ ಬೆತ್ತದ ಕುರ್ಚಿಯ ಮೇಲೆ ಕುಳಿತ ದೊಡ್ಡೇಗೌಡ ಒಂದು ಸಿಗರೇಟ್ ಹಚ್ಚಿ,

" ಸಬ್ ಇನ್ಸ್‌ಪೆಕ್ಟರು ಒಂದು ಲಾರಿ ಸೀಜ್ ಮಾಡಿದ್ದಾರೆ ಸ್ವಾಮಿ."

" ಏಕೆ ?"

" ಹೊತ್ತಲ್ಲದ ಹೊತ್ತಿನಲ್ಲಿ ಬಂದ ಎಂದು."

"ಅದಕ್ಕೇನು ಗೌಡರೇ–ಮಾಲಿಕರು ಬೆಳಗ್ಗೆ ಸ್ಟೇಷನ್ನಿಗೆ ಬರಲಿ–ವಿಚಾರಿಸೋಣ."

"ಬೆಳಗ್ಗಿನವರೆಗೂ ಲಾರಿಯನ್ನು ಸ್ಟೇಷನ್ ಮುಂದೆ ಬಿಡುವುದಕ್ಕಾಗುವುದಿಲ್ಲ"

"ಏಕೆ?"

"ಮಾಲ್ ಇದೆ."

"ಮಾಲು ಕಾಯುವುದಕ್ಕೆ ನಾನು ಬಲವಾದ ಸಿಬ್ಬಂದಿ ಹಾಕುತ್ತೇನೆ."

ಕುರ್ಚಿಯಲ್ಲಿ ನುಲಿದಾಡಿದ ದೊಡ್ಡೇಗೌಡ,

"ತಾವು ದೊಡ್ಡ ಮನಸ್ಸುಮಾಡಿ ಲಾರಿ ಬಿಟ್ಟುಕೊಡಬೇಕು–ಇದಕ್ಕಾಗಿ ನೀವು ಏನು ಕೇಳಿದರೂ ನಾನು ಕೊಡೋದಿಕ್ಕೆ ಸಿದ್ಧವಾಗಿದ್ದೇನೆ."

"ನನಗೆ ಲಂಚ ಹೊಡೆಯುವ ಅಭ್ಯಾಸವಿಲ್ಲ ಗೌಡರೇ."

"ಇದು ಲಂಚವಲ್ಲ ಸ್ವಾಮಿ–ಉಪಕಾರಸ್ಮರಣೆ."

"ಈ ಲಾರಿ ಬಗ್ಗೆ ನಿಮಗೇಕೆ ಇಷ್ಟು ಆಸಕ್ತಿ?"

"ಮಾಲು ನನ್ನದು."

"ನಿಮ್ಮ ಮಾಲ್ ಅಳ್ಳಾಡದಂತೆ ನೋಡಿಕೊಳ್ಳಲು ನಾನು ಭರವಸೆ ಕೊಡುತ್ತಿದ್ದೇನಲ್ಲಾ!"

"ಮಾಲು ಜನಗಳ ಕಣ್ಣಿಗೆ ಬಿದ್ದರೆ ನನ್ನ ಮರ್ಯಾದೆ ಹೋಗುತ್ತದೆ."

"ಲಾರಿಯಲ್ಲಿ ಇರುವುದೆಲ್ಲಾ ನಿಷಿದ್ಧಪದಾರ್ಥಗಳು ಎಂದು ನನಗೆ ಗೊತ್ತಿದೆ ಗೌಡರೇ. ಅದಕ್ಕೇ ನಾನು ಲಾರಿ ಬಿಡಲು ಸಿದ್ಧವಾಗಿಲ್ಲ."

"ದಯವಿಟ್ಟು ನನ್ನ ಮಾತು ಕೇಳಿ–ಹಟ ಮಾಡಬೇಡಿ–ಇದು ಕಾನಕಾನಹಳ್ಳಿ–ಇಲ್ಲಿ ನಿಮ್ಮ ಪೋಲೀಸ್ ಜಬರ್‌ದಸ್ತು ನಡೆಯುವುದಿಲ್ಲ."

"ನಡೆಯುತ್ತೋ ಇಲ್ಲವೋ ಎನ್ನುವುದರ ಪರೀಕ್ಷೆಮಾಡಿ ನೋಡಿಬಿಡೋಣ."

ಕೆರಳಿದ ದೊಡ್ಡೇಗೌಡ,

"ರೀ–ಇನ್ಸ್‌ಪೆಕ್ಟರೇ–ಒಳ್ಳೆಯ ಮಾತಿನಲ್ಲಿ ಲಾರಿ ಬಿಡ್ತೀರೋ ಇಲ್ರೀ."

ಪ್ಯೆಲಾರಯ್ಯ ಕೂಡಲೆ ಉತ್ತರಿಸಲಿಲ್ಲ.

ಒಂದು ನಿಮಿಷ ಗೌಡನನ್ನು ದಿಟ್ಟಿಸಿ ನೋಡಿ,

"ನಮ್ಮ ಮನೆಗೆ ನೀವು ಬಂದಿರಿ ಎಂದು ಗೌರವ ಕೊಟ್ಟು ಮಾತಾಡಿಸಿದೆ–ಆ ಗೌರವ ಉಳಿಸಿಕೊಳ್ಳಿ ಗೌಡರೇ. ಈಗ ಪೋಲೀಸ್ ಆಡಳಿತ ಸ್ವಲ್ಪ ಬದಲಾ

ಗಿದೆ. ಲಂಚ ತೆಗೆದುಕೊಳ್ಳದಿರುವ ಕೆಲವು ಅಧಿಕಾರಿಗಳೂ ಇದ್ದಾರೆ ಎನ್ನುವುದನ್ನು ಮರೆಯಬೇಡಿ."

"ನನಗೆಲ್ಲಾ ಗೊತ್ತಿದೆ ಕಣ್ರೀ–ರಾಮಣ್ಣಗೌಡ ಲಂಚಕೊಡದೆ ನೀವು ಸಿನಿಮಾ ಟಿಕೆಟ್ ಮಾರಿಸಿಕೊಡುತ್ತೀರೇನೋ ?"

"ಪ್ರದರ್ಶನದ ದಿನ ರಾಮಣ್ಣಗೌಡರು ಲೆಕ್ಕ ಒಪ್ಪಿಸಿದರಲ್ಲಾ–ನಿಮಗೆ ಧೈರ್ಯವಿದ್ದಿದ್ದರೆ ಅವರನ್ನು ಅಲ್ಲೇ ಪ್ರತಿಭಟಿಸಬೇಕಾಗಿತ್ತು."

"ಅದೆಲ್ಲಾ ಬೇಡ–ಸದ್ಯಕ್ಕೆ ನಮ್ಮ ಮಾತು ಹೇಳಿ."

"ನಾನು ಹೇಳಿದ್ದಾಯಿತು–ನಿಮ್ಮ ಲಾರಿ ಬಿಡಲಾಗುವುದಿಲ್ಲ–ಬೆಳಿಗ್ಗೆ ಪಂಚನಾಮೆ ಮಾಡಿಸಿ, ಲಾರಿಯಲ್ಲಿರುವ ಮಾಲನ್ನು ವಶಪಡಿಸಿಕೊಳ್ಳುತ್ತೇನೆ"

ಎಂದು ಮೇಲಕ್ಕೆದ್ದು,

"ಇನ್ನು ನೀವು ಹೋಗಬಹುದು" ಎಂದ.

ಕೋಪತಪ್ತನಾದ ದೊಡ್ಡೇಗೌಡ,

"ಸಿಂಹಾನ ಕೆರಳಿಸಿ ಜಗಳ ಕಟ್ಟಿಕೊಳ್ಳುತ್ತಿದೀರಿ–ಆಗಲಿ, ನಾಳೆ ನೀವು ಎಲ್ಲಿರುತ್ತೀರೋ ನೋಡ್ತೀನಿ"

ಎಂದು ಹೊರಟುಬಿಟ್ಟ.

ಸಾಕಿದ ನಾಯಿಯಂತೆ ಲಿಂಗಣ್ಣ ಅವನನ್ನು ಹಿಂಬಾಲಿಸಿದ.

## ೧೯

ಬೆಳಗಿನ್ನೂ ಸರಿಯಾಗಿ ಮೂಡೇ ಇರಲಿಲ್ಲ.

ಮುಸಕು ಮುಸಕು ಕತ್ತಲೆ ಆವರಿಸಿತ್ತು.

ಮೈಲಾರಯ್ಯ ಎದ್ದು ಹಾಸಿಗೆಯ ಮೇಲೆ ಕುಳಿತು, ಸಿಗರೇಟ್ ಹಚ್ಚಿದ.

ಗಂಡ ಎದ್ದುದನ್ನು ಕಂಡು ಮೇಲಕ್ಕೆದ್ದ ಜಾನಕಮ್ಮ ಒಳಗೆ ಹೋಗಿ ಒಂದು ಕಪ್ ಕಾಫಿ ಮಾಡಿಕೊಂಡು ಬಂದು ಅವನ ಕೈಗಿತ್ತು,

" ಇದೇನು ಇಷ್ಟು ಬೇಗ ಎದ್ದುಬಿಟ್ಟಿದ್ದೀರಿ ?" ಎಂದು ಕೇಳಿದಳು.

" ಮುಖ ತೊಳೆದುಕೊಂಡು ಸ್ಟೇಷನ್ ಹತ್ತಿರ ಹೋಗಿಬರುತ್ತೇನೆ. ಆ ಲಾರಿ ಅವಾಂತರ ಏನಾಗಿದೆಯೋ ನೋಡಿಕೊಂಡು ಬರುತ್ತೇನೆ."

" ಸ್ನಾನ ಮಾಡುವುದಿಲ್ಲವೇ ?"

" ಬಂದು ಮಾಡುತ್ತೇನೆ "

ಎಂದವನು ಮುಖಮಾರ್ಜನೆ ಮುಗಿಸಿಕೊಂಡು ಹೊರಗೆ ಬರುವ ವೇಳೆಗೆ ಸರಿಯಾಗಿ ಧಾವಿಸಿ ಬಂದ ಶಂಕರಪ್ಪ,

" ಬೇಗ ಸ್ಟೇಷನ್ನಿಗೆ ಬನ್ನಿ ಸಾರ್ " ಎಂದ.

" ಏಕೆ ಶಂಕರಪ್ಪ."

" ಸಾಯೇಬ್ರಿಂದ ತಮಗೆ ಟ್ರಂಕಾಲ್ (Trunk call) ಬಂದಿದೆ- ಅರ್ಜಂಟಂತೆ !"

" ನೀವು ನಡೆಯರಿ-ಬಟ್ಟೆ ಹಾಕಿಕೊಂಡು ಬರುತ್ತೇನೆ "

ಎಂದು ಬಟ್ಟೆ ಧರಿಸಿ ಸ್ಟೇಷನ್ನಿಗೆ ಹೋಗಿ ತಾನೇ ಸಾಹೇಬರಿಗೆ ಟ್ರಂಕಾಲ್ ಮಾಡಿದ.

ಸ್ವಲ್ಪ ಕಾಲಾನಂತರ ಕಾಲ್ ಬಂದಿತು.

" ಯಾರು ?"

" ನಾನು ಸಾರ್-ಇನ್ಸ್‌ಪೆಕ್ಟರ್ ಮೈಲಾರಯ್ಯ "

" Sorry to disturb you Mylaraiah."

" ಏನಿಲ್ಲ ಸಾರ್–ನಾನೂ ಸ್ಟೇಷನ್ನಿಗೇ ಹೊರಟಿದ್ದೆ. ಶಂಕರಪ್ಪ ಬಂದು ತಿಳಿಸಿದರು. ಏನು ಸಮಾಚಾರ ಸಾರ್."

" ನಿನ್ನೆ ಯಾವುದೋ ಲಾರಿ ಹಿಡಿದಿದ್ದೀರಂತಲ್ಲಪ್ಪಾ."

" ಹೌದು ಸಾರ್–ಈಗ ಮಹಜರು ಮಾಡಿ, ಕೇಸ್ ಹಾಕ್ತೀನಿ–ಲಾರಿ ತುಂಬ ನಿಷಿದ್ಧ ಪದಾರ್ಥಗಳಿವೆ."

" ಚಾರ್ಜ್‌ಷೀಟ್ ಹಾಕಬೇಡಿ."

" ಏಕೆ ಸಾರ್ ?"

" ಅದನ್ನೆಲ್ಲಾ ಫೋನಿನಲ್ಲಿ ಕೇಳಬೇಡಿ. ಲಾರಿಯನ್ನು ಕೂಡಲೆ ಡ್ರೈವರಿಗೆ ಒಪ್ಪಿಸಿಬಿಡಿ."

" ಹೀಗೆ ಮಾಡಿದರೆ ನನ್ನ ಪ್ರೆಸ್ಟೀಜ್ (prestige) ಉಳಿಯುತ್ತೆಯೇ ಸಾರ್."

" Look here Mylaraiah. First learn to obey orders."

" Yes Sir "

ಎಂದವನೇ ರಿಸೀವರ್ ಕೆಳಗಿಟ್ಟುಬಿಟ್ಟ.

ಶಂಕರಪ್ಪ ಮೆಲ್ಲನೆ,

" ಹಾಳಾಗಿ ಹೋಗಲಿ–ಬಿಟ್ಟುಬಿಡಿ ಸಾರ್."

" ಮಣ್ಣು ತಿನ್ನೋಕೆ ನಾನು ಪೋಲೀಸ್ ಡಿಪಾರ್ಟ್‌ಮೆಂಟ್ ಸೇರಿದೆ ಶಂಕರಪ್ಪ. ಸುಮ್ಮನೆ ರಿಸೈನ್ (resign) ಮಾಡಿ ಮನೆಗೆ ಹೋಗೋದು ಎಷ್ಟೋ ಗೌರವ."

" ಮೇಲಧಿಕಾರಿಗಳು ಹೀಗೆ ಮಾಡುವ ಹೊತ್ತಿಗೇ, ನಮ್ಮ ಡಿಪಾರ್ಟ್‌ಮೆಂಟ್ ಕಂಡರೆ ಜನರಿಗೆ ಗೌರವವಿಲ್ಲ "

" ಅಧಿಕಾರಿಗಳು ಏನು ಮಾಡ್ತಾರ್ರೀ–ಇದು ಪ್ರಜಾರಾಜ್ಯ."

" ಈಗ ಏನು ಮಾಡೋದು ಸಾರ್."

" ಮಾಡೋದೇನು ಡ್ರೈವರಿಗೆ ಹೇಳಿಕಳಿಸಿ ಲಾರಿ ಒಪ್ಪಿಸಿಬಿಡಿ–ಹಾಗೇ ನಮ್ಮ ಮನೆಗೆ ಸುದ್ದಿ ಕಳಿಸಿ–ನಾನು ಹೀಗೇ ಬೆಂಗಳೂರಿಗೆ ಹೋಗಿ ಬರುತ್ತೇನೆ."

" ಮೇಲಿನವರ ವಿರೋಧ ಕಟ್ಟಿಕೊಳ್ಳಬೇಡಿ ಸಾರ್."

" ಇನ್ನು ಈ ಊರಿನಲ್ಲಿ ನಾನು ಇನ್ಸ್‌ಪೆಕ್ಟರ್ ಆಗಿರೋದಿಲ್ರೀ "

ಎಂದೆದ್ದು ಬಸ್‌ಸ್ಟ್ಯಾಂಡಿನ ಕಡೆ ನಡೆದ.

ಮೈಲಾರಯ್ಯ ಬೆಂಗಳೂರಿನಲ್ಲಿ ಬಸ್ ಇಳಿದವನೇ ಒಂದು ಆಟೋ–ರಿಕ್ಷಾ

(Auto-rickshow) ಗೊತ್ತು ಮಾಡಿಕೊಂಡು ಸುಬ್ಬರಾಯಪ್ಪನವರ ಮನೆಗೆ ಬಂದ. ಸುಬ್ಬರಾಯಪ್ಪನವರು ಅದೇ ಮನೆ ಬಿಟ್ಟು ಆಫೀಸಿಗೆ ಹೋಗಿದ್ದರು.

ಆಫೀಸಿಗೇ ಹೋದ ಮೈಲಾರಯ್ಯ 'ಭೆಟ್ಟಿಯ ಚೀಟಿ' (Visiting Card) ಒಳಗೆ ಕಳಿಸಿ, ಸಾಹೇಬರ ಕರೆ ಕಾಯುತ್ತ ಕುಳಿತ.

ಹತ್ತು ನಿಮಿಷಗಳಾನಂತರ ಸಾಹೇಬರು ಹೇಳಿಕಳಿಸಲು ಒಳಗೆ ಹೋದ ಮೈಲಾರಯ್ಯ ಸೆಲ್ಯೂಟ್ ಹಾಕಿ ನಿಂತುಕೊಂಡ.

"ಕುಳಿತುಕೊಳ್ಳಿ ಮೈಲಾರಯ್ಯ"

"ಇರಲಿ ಸಾರ್."

"ನೀವು ಬಹಳ ಕೋಪದಲ್ಲಿರುವಂತೆ ಕಾಣುತ್ತದೆ."

"ತಾಪೇದಾರರಿಗೆ ಕೋಪ ಮಾಡಿಕೊಳ್ಳುವ ಅಧಿಕಾರ ಎಲ್ಲಿದೆ ಸ್ವಾಮಿ."

"I am Sorry I say, really very sorry!"

"ಆರ್ಡರ್ಸ್ ಪರಿಪಾಲಿಸಿದ್ದೇನೆ ಸ್ವಾಮಿ."

ತಲೆ ತಗ್ಗಿಸಿ ಕುಳಿತ ಸುಬ್ಬರಾಯಪ್ಪನವರು,

"ನಾವು ನೀವು ಎಲ್ಲರೂ ಒಂದು ರಾಕ್ಷಸ ಯಂತ್ರದ ಸಣ್ಣಸಣ್ಣ ಕೀಲುಗಳು ಮೈಲಾರಯ್ಯ. ದಯೆಯಿಟ್ಟು ನನ್ನ ತಪ್ಪು ತಿಳಿದುಕೊಳ್ಳಬೇಡಿ–ನೀವು ಹೇಳಬಹುದಾದುದೆಲ್ಲವನ್ನೂ ನಾನು ಡಿ. ಐ. ಜಿ ಯವರೊಂದಿಗೆ ವಾದಮಾಡಿದ್ದೇನೆ. ಅವರೂ ನಿರುಪಾಯರಾಗಿದ್ದಾರೆ ಅವರೂ ಮೇಲಧಿಕಾರಿಗಳ ಆಜ್ಞಾಧಾರಕರಾಗಿದ್ದಾರೆ."

"ದೊಡ್ಡೇಗೌಡನ ಅವಾಂತರಕ್ಕೆ ನಾವೇ ಊರನ್ನು ಒಪ್ಪಿಸಿಕೊಟ್ಟಂತಾಯಿತಲ್ಲಾ ಸ್ವಾಮಿ. ಇನ್ನು ಅವನನ್ನು ಹಿಡಿಯಲು ಯಾರಿಗೆ ಸಾಧ್ಯ? ಕಾನೂನು, ಸಿಸ್ತನ್ನು ರಕ್ಷಿಸುವ ಪೋಲೀಸಿನವರ ಗತಿಯೇನು?–ನಿರಪರಾಧಿಗಳಾಗಿರುವ ಊರಿನವರ ಗತಿಯೇನು?"

"ಪ್ರಜಾರಾಜ್ಯದ ಮಂತ್ರಿಗಳು ನಿಮ್ಮ ಪ್ರಶ್ನೆಗೆ ಉತ್ತರ ಹೇಳಬೇಕು."

"ನಾನಿನ್ನು ಕಾನಕಾನಹಳ್ಳಿಗೆ ಡ್ಯೂಟಿ ಮೇಲೆ ಹೋಗುವುದಿಲ್ಲ ಸಾರ್."

"ಇನ್ನೆಲ್ಲಿಗೆ ಹೋಗುತ್ತೀರಿ?"

"ಎಲ್ಲಿಗಾದರೂ ಕಳಿಸಿ–ಚಿಂತೆಯಿಲ್ಲ. ಸದ್ಯಕ್ಕೆ ಒಂದು ತಿಂಗಳು ರಜಾ ಸ್ಯಾಂಕ್ಷನ್ ಮಾಡಿ."

"ಹಟ ಹಿಡಿಯಬೇಡಿ ಮೈಲಾರಯ್ಯ."

"ಗೌರವ ಹೋದ ಮೇಲೆ ಏಕೆ ಬದುಕಬೇಕು ಸ್ವಾಮಿ. ಹಾಳು ಹೊಟ್ಟೆ

ವಾಡಿಗೋಸ್ಕರ ನಾವು ನಾಯಿನರಿಗಳಂತೆ ಬಾಳಬೇಕೆ? ಎಲ್ಲಿಯಾದರೂ ಕೂಲಿ ಮಾಡಿದರೆ ನನ್ನ ಅನ್ನ ಹುಟ್ಟುತ್ತದೆ.–ಸಾಹೇಬರಿಗೆ ತಾವೇ ಮೆಮೋ ಕಳಿಸು ತ್ತೀರೋ ನಾನೇ ಹೋಗಿ ಕಾಣಲೋ ?"

"ನೀವು ಸುಮ್ಮನೆ ಇಲ್ಲಿ ಕುಳಿತುಕೊಳ್ಳಿ. ನಾನು ಹೋಗಿ ಸಾಹೇಬ ರೊಂದಿಗೆ ಮಾತಾಡಿಕೊಂಡು ಬರುತ್ತೇನೆ.–ಸೋಲೂರಿಗೆ ಹಾಕಿಸಿದರೆ ಹೋಗುತ್ತೀ ರೇನ್ರೀ ?"

"ಸುಡುಗಾಡಿಗೆ ಬೇಕಾದ್ರೂ ಹೋಗ್ತೀನಿ ಸ್ವಾಮಿ–ಕಾನಕಾನಹಳ್ಳಿ, ತಪ್ಪಿಸಿಬಿಡಿ."

ಮೈಲಾರಯ್ಯನನ್ನು ತಮ್ಮ ಕಛೇರಿಯಲ್ಲಿ ಕೂಡಿಸಿ ಸುಬ್ಬರಾಯಪ್ಪನವರು ಸಾಹೇಬರನ್ನು ಕಾಣಲು ಹೋದರು.

ಸುಬ್ಬರಾಯಪ್ಪ ಹೇಳಿದುದನ್ನೆಲ್ಲಾ ಸಾವಕಾಶವಾಗಿ ಲಾಲಿಸಿದ ಡಿ. ಐ. ಜಿ ಸಾಹೇಬರು,

"He is perfectly right Mr. Subbarayappa" ಎಂದರು.

"ಕಾನಕಾನಹಳ್ಳಿಗೆ ಹಿಂದಿರುಗುವುದಿಲ್ಲ. ಒಂದು ತಿಂಗಳು ರಜಾ ಕೊಡಿಸಿ, ಎಲ್ಲಿಗಾದರೂ ಟ್ರಾನ್ಸ್‌ಫರ್ ಮಾಡಿಸಿ ಎಂದು ಮೈಲಾರಯ್ಯ ಕೇಳುತ್ತಿದ್ದಾರೆ."

"ರಜಾ ಬೇಡ–ಟ್ರಾನ್ಸ್‌ಫರ್ ಮಾಡೋಣ–ಎಲ್ಲಿಗೆ ಹೋಗುತ್ತಾರಂತೆ!"

"ಸೋಲೂರಿಗೆ ಹೋಗಿ ಎಂದು ನಾನೇ ಹೇಳಿದೆ."

"ಹಾಗೇ ಮಾಡಿ–ಸೋಲೂರಿಗೆ ಪೋಸ್ಟ್ ಮಾಡಿಸಿ.–ಈ ಪುಢಾರಿಗಳಿಂದ ಸರ್ಕಾರದ ಮೊರೇಲೇ (Morale) ಹಾಳಾಗುತ್ತಿದೆ ಸುಬ್ಬರಾಯಪ್ಪ–ದೇಶದ ಅಸ್ತಿತ್ವಕ್ಕೇ ಪೆಟ್ಟು ಬೀಳುತ್ತಿರುವುದನ್ನು ಈ ರಾಜಕಾರಣಿಗಳು ಅರ್ಥಮಾಡಿ ಕೊಂಡಿಲ್ಲ–God save this country" ಎಂದರು.

# ೨೦

ಗಂಡನಿಗೆ ಸೋಲೂರಿಗೆ ವರ್ಗವಾದುದನ್ನು ಕೇಳಿದ ಜಾನಕಮ್ಮ ಹಿರಿ ಹಿರಿ ಹಿಗ್ಗಿ,

“ಸುಭದ್ರನ ಹತ್ತಿರ ಇರಬೇಕೆಂದು ಬಯಸುತ್ತಿದ್ದೆ. ದೇವರಿಗೆ ನನ್ನ ಮೊರೆ ಮುಟ್ಟಿತೆಂದು ಕಾಣುತ್ತದೆ” ಎಂದಳು.

ಮೈಲಾರಯ್ಯ ಸೋಲೂರಿಗೆ ಬಂದುದನ್ನು ಕಂಡು,

“ಈಗ ಒಪ್ಪಿದೆ–ನೀವು ಸುಳ್ಳು ಏಳಾಕಿಲ್ಲ.”

ಎಂದು ಚೆನ್ನಿ ಒಪ್ಪಿಕೊಂಡಳು.

ದಿನ ತುಂಬಿದ ಮೇಲೆ ಸುಭದ್ರ ಒಳ್ಳೆಯ ನಕ್ಷತ್ರದಲ್ಲಿ ಹೆಣ್ಣುಮಗುವನ್ನು ಪ್ರಸವಿಸಿದಳು.

ವೆಂಕಣ್ಣನವರು ಬೆಂಗಳೂರಿಗೆ ಕಾಗದ ಬರೆದು ಕಳಿಸಿ, ಅಳಿಯನನ್ನು ಬರಮಾಡಿಕೊಂಡರು.

ಮಂಗಳಸ್ನಾನವಾದ ಮೇಲೆ ನಾಮಕರಣ ಮಹೋತ್ಸವವನ್ನಿಟ್ಟುಕೊಂಡು, ಮಗುವಿಗೆ ‘ಮನೋರಮಾ’ ಎಂದು ಹೆಸರಿಟ್ಟರು.

ಅಂಬಮ್ಮನವರು ಆಸ್ಪತ್ರೆ ಡಾಕ್ಟರುಗಳು, ದಾದಿಯರನ್ನು ಹತ್ತಿರ ಸುಳಿಯಗೊಡಲಿಲ್ಲ. ಮಗಳಿಗೆ ಪರಂಪರಾಗತವಾದ ಬಾಣಂತನ ಆರಂಭಿಸಿದರು. ದಿನಬಿಟ್ಟು ದಿನ ನೀರು ಹಾಕಿ, ಖಾರ, ಲೇಹ್ಯ ಕೊಡಲಾರಂಭಿಸಿದರು.

ಮನೋರಮಾ ಎಲ್ಲರ ಕಣ್ಮಣಿಯಾದಳು.

ಜಾನಕಮ್ಮನಂತೂ ಮಗುವನ್ನು ಕೆಳಗೇ ಇಳಿಸುತ್ತಿರಲಿಲ್ಲ. ಒಂದು ಗಳಿಗೆ ತೊಟ್ಟಿಲಿಗೆ ಹಾಕಿದರೆ ಮನೋರಮಾ ಮನೆ ಕಿತ್ತುಹೋಗುವಂತೆ ರಂಪ ಮಾಡುತ್ತಿದ್ದಳು.

ಮಗಳ ತುಂಟತನ, ಅದಕ್ಕೆ ಜಾನಕಮ್ಮ ಮಾಡುತ್ತಿದ್ದ ಸೇವೆ ಶಿಶ್ರೂಷೆಯನ್ನು ಕಂಡ ಸುಭದ್ರ,

“ಇಲ್ಲಿಂದ ನಾನು ಬೆಂಗಳೂರಿಗೆ ಹೋದ ಮೇಲೆ ಈ ತಾಟಕಿತ್ತಿಯನ್ನು

ಹಿಡಿಯುವುದು ಹೇಗೆ ಅಕ್ಕಾ. ಬೆಳಿಗ್ಗೆಯಿಂದ ಸಂಜೆಯವರೆಗೆ ಇವಳನ್ನು ಎತ್ತಿಕೊಂಡು ಕುಳಿತುಕೊಂಡರೆ ಮನೆಗೆಲಸ ಮಾಡುವವರು ಯಾರು ?"

ಮಗುವನ್ನು ಮುದ್ದಿಸುತ್ತ ಜಾನಕಮ್ಮ,

"ಅಷ್ಟು ಹೊತ್ತಿಗೆ ನಾವೂ ಬೆಂಗಳೂರಿಗೆ ಬಂದುಬಿಡುತ್ತೇವೆ-ಹೆದರ ಬೇಡ ಸುಭದ್ರಾ"

ಎನ್ನುತ್ತಿದ್ದಳು

ಏನನ್ನೋ ಯೋಚಿಸುತ್ತಾ ಒಮ್ಮೊಮ್ಮೆ ಸುಭದ್ರ ಅಲವತ್ತುಕೊಂಡು,

"ಥೂ-ಈ ಹಾಳು ಹೆಣ್ಣು ಯಾಕೆ ಹುಟ್ಟಿತೋ ?"

ಎನ್ನುತ್ತಿದ್ದಳು.

ಜಾನಕಮ್ಮ ಮಗುವನ್ನು ಎದೆಗಪ್ಪಿಕೊಂಡು,

"ಹಾಗನ್ನಬೇಡ ಕಣೇ ಸುಭದ್ರಾ-ಇವಳು ನಮ್ಮ ಮನೆ ರಾಜರಾಜೇಶ್ವರಿ-ಹೆಣ್ಣಾದರೇನು ನಿನಗೆ ಗುನಗಾದದ್ದು-ನೀನು ಹೆಣ್ಣು-ನಿಮ್ಮಮ್ಮ ಹೆಣ್ಣು-ನಾನು ಹೆಣ್ಣು."

"ಅಲ್ಲಾ ಅಕ್ಕಾ-ಹೆಣ್ಣಿಗೋಸ್ಕರ ಎಷ್ಟು ಕಷ್ಟಪಡಬೇಕು ನೋಡಿ ಇದಕ್ಕಿನ್ನೂ ಹತ್ತು ಹನ್ನೆರಡು ತುಂಬುವ ಹೊತ್ತಿಗೇ ಗಂಡಿನ ಚಿಂತೆ ಆಮೇಲೆ ಮದುವೆ ಯೋಚನೆ-ಕಟ್ಟಿಕೊಳ್ಳುವವನು ಒಳ್ಳೆಯವನಾದರೆ ಸರಿಹೋಯಿತು ಇಲ್ಲದಿದ್ದರೆ ಹಗಲೂ ರಾತ್ರಿ ಇದೇ ಚಿಂತೆ !"

"ಅದಕ್ಕೇ ಸಂಸಾರ ಅನ್ನೋದು ಸುಭದ್ರಾ. ಚಿಂತೆ, ಯೋಚನೆ ಇಲ್ಲದಿದ್ದರೆ ಎರಡು ಜೀವ ಒಂದಾಗುತ್ತದೆಯೇನೇ ? ನನ್ನ ಕಂದನ್ನ ನೀನು ಬಾಸ್ಸ ಬೇಡಮ್ಮ-ನನಗೆ ತುಂಬ ಕೋಪ ಬಂದುಬಿಡತ್ತೆ."

"ಅಕ್ಕಾ-ನನಗೋಸ್ಕರ ನೀವು ಜೀವ ತೇಯುತ್ತಿದ್ದೀರಿ. ನಿಮ್ಮನ್ನ ಕೂಡಿಸಿ ಒಪ್ಪತ್ತು ಅಡಿಗೆಮಾಡಿ ನಾನು ಬಡಿಸಲಿಲ್ಲವಲ್ರೀ !"

"ನಮ್ಮ ಮನೂನ ನೀನು ಚೆನ್ನಾಗಿ ಬೆಳಸಿ, ವಿದ್ಯಾಬುದ್ಧಿ ಕಲಿಸಿ, ಹುಟ್ಟಿದ ಮನೆ, ಸೇರಿದ ಮನೆ ಎರಡಕ್ಕೂ ಕೀರ್ತಿ ತರುವ ಹಾಗೆ ಮಾಡಿದರೆ ನನ್ನ ತಲೆಯ ಮೇಲೆ ಚಿನ್ನದ ಕಿರೀಟ ಇಟ್ಟಂತಾಗುತ್ತದೆ ಕಣೇ. ಹೆಣ್ಣು ಜನ್ಮ ಕಷ್ಟದ ಜನ್ಮ-ಆದರೆ ಜೀವ ಮಾಗಬೇಕಾದರೆ ಹೆಣ್ಣಾಗಿಯೇ ಹುಟ್ಟಬೇಕು ನೋಡು. ಗಂಡಿಗೆ ಮೈಯೆಲ್ಲಾ ಕಣ್ಣು-ಎಲ್ಲಾ ಕಣ್ಣು ಬಿಟ್ಟುಕೊಂಡು ಅವನು ನೋಡುತ್ತಿರುವುದರಿಂದ ಏನೂ ಅವನ ಕಣ್ಣಿಗೆ ಬೀಳುವುದಿಲ್ಲ. ಹೆಣ್ಣಿಗೆ ಇರುವುದೆಲ್ಲಾ ಎರಡೇ ಕಣ್ಣು-ಒಂದು ತೌರುಮನೆ ಕಡೆಗೆ ; ಒಂದು ಅತ್ತೆಯ ಮನೆ

ಕಡೆಗೆ. ಎರಡು ಮನೆಯೂ ಚೆನ್ನಾಗಿ ಬಾಳಿ, ಬದುಕಲಿ ಎಂದು ಹೆಣ್ಣು ಹಾರೈಸುತ್ತಿರುತ್ತಾಳೆ."

" ಇದನ್ನೆಲ್ಲಾ ಭಾವನವರಿಗೆ ಹೇಳಿದ್ದೀರಾ ಅಕ್ಕಾ ?"

" ಸಾಕು ಸುಮ್ಮನಿರೇ–ಅವರು ನನ್ನ ನೋಡಿ ನಕ್ಕರೆ ನಿನಗೆ ಸಂತೋಷ ವೇನೋ ?"

" ನೀವೂ ಭಾವ ಜಗಳ ಕಾಯೋದನ್ನ ನಾನು ನೋಡಬೇಕಕ್ಕಾ !"

" ನಮ್ಮಿಬ್ಬರಿಗೂ ಜಗಳ ತಂದಿಡಬೇಕೆಂದಿದ್ದೀಯಾ ?"

" ಇಲ್ಲ–ಸುಮ್ಮನೆ ಅಂದೆ "

" ನಾನು ಜಗಳ ಕಾಯ್ತೀನಿ–ಅವರು ಎದುರುವಾದಿಸೋದೇ ಇಲ್ಲ. ನಾನು ಬಾಯಿ ತೆಗೆದ ಕೂಡಲೆ ' ಹಾಗೇ ಮಾಡುವಿಯಂತೆ–ಸುಮ್ಮನಿರು ' ಎಂದುಬಿಡು ತ್ತಾರೆ. ಅವರ ಹತ್ತಿರ ಹೇಗೆ ಜಗಳ ಕಾಯಲಿ."

" ಭಾವನೋರ ಗುಣವೇ ಗುಣ–ಅದು ಎಲ್ಲರಿಗೂ ಬರುವುದಿಲ್ಲ ಅಕ್ಕಾ."

" ಏಕೆ–ನಮ್ಮ ಶಾಮೂ ಏನು ಕಡಿಮೆಯಾಗಿರೋದು."

" ಅವರು ಎಲ್ಲಾ ಸರಿ–ಆದರೆ...."

" ಆದರೆ....?"

" ದುಡ್ಡುಕಾಸಿನ ವಿಷಯದಲ್ಲಿ ಬಹಳ ಜಿನುಗು–ಭಾವನವರ ಧಾರಾಳ ಅವರ ತಮ್ಮನಿಗೆ ಬರೋದಿಲ್ಲ."

" ಶಾಮೂ ಈಗತಾನೇ ಸಂಸಾರ ಆರಂಭಿಸಿದ್ದಾನೆ. ದುಡ್ಡುಕಾಸಿನ ವಿಷಯದಲ್ಲಿ ಅವನು ಹಿಡಿತ ಮಾಡದಿದ್ದರೆ ನಾಳೆ ನಿನಗೇ ತೊಂದರೆ."

" ನಾನೇನು ದಂಧರಹಾಳಿಯಲ್ಲ ಅಕ್ಕಾ."

" ಹೋಗಲಿ ಬಿಡು. ಸಣ್ಣ ವಿಷಯ ದೊಡ್ಡದು ಮಾಡಿಕೊಂಡು ಇಬ್ಬರೂ ಮನಸ್ಸು ಕೆಡಿಸಿಕೊಳ್ಳಬೇಡಿ "

ಎಂದು ಬುದ್ಧಿ ಹೇಳಿದಳು.

## ೨೧

ಒಂಟಿಜೀವನ ಶಾಮನಿಗೆ ಸ್ವಲ್ಪವೂ ಬೇಸರ ಬರಿಸಲಿಲ್ಲ.

ಹೊಟೇಲಿಗೆ ಹಣ ಸುಕ್ಕುವುದೇಕೆಂದು ಅವನೇ ಅನ್ನ ಮಾಡಿಕೊಂಡು, ಹೊಟೇಲಿನಿಂದ ಹುಳಿ, ಸಾರು ತರಿಸಿಕೊಳ್ಳುತ್ತಿದ್ದ.

ಮನೆಯನ್ನಂತೂ ಬಿಡುವಂತಿರಲಿಲ್ಲ. ಅಷ್ಟು ಬಾಡಿಗೆಯನ್ನು ತಾನೊಬ್ಬನೇ ಏಕೆ ಪೂರೈಸಬೇಕೆಂದು ವೆರಾಂಡದ ಪಕ್ಕದಲ್ಲಿದ್ದ ರೂಮೊಂದನ್ನು ತನ್ನ ಸಹಾಧ್ಯಾಯಕ ಅಶ್ವತ್ಥನಾರಾಯಣನಿಗೆ ಹನ್ನೆರಡು ರೂಪಾಯಿಗೆ ಬಾಡಿಗೆಗೆ ಕೊಟ್ಟಿದ್ದ.

ಬೆಳಿಗ್ಗೆ ಸಾಯಂಕಾಲ ಎರಡೆರಡು ಪಾಠಗಳನ್ನಿಟ್ಟುಕೊಂಡು, ಅದರಿಂದ ತಿಂಗಳಿಗೆ ನಲವತ್ತು ರೂಪಾಯಿ ಸಂಪಾದಿಸುತ್ತಿದ್ದ.

ಮೈಲಾರಯ್ಯ ತಪ್ಪದೆ ತಮ್ಮನಿಗೆ ೩೦-೪೦ ರೂಪಾಯಿಗಳನ್ನು ಕಳಿಸುತ್ತಿದ್ದ.

ಶಾಮ ತಿಂಗಳಿಗೆ ಒಟ್ಟು ೧೪೦-೧೯೦ ರೂಪಾಯಿಗಳನ್ನು ಸಂಪಾದಿಸುತ್ತಿದ್ದರೂ ನಲವತ್ತೈದು ರೂಪಾಯಿಗಳ ಮೇಲೆ ಖರ್ಚು ಮಾಡುತ್ತಿರಲಿಲ್ಲ.

ಅಶ್ವತ್ಥನಾರಾಯಣನೂ ಒಂದೆರಡು ಪಾಠಗಳನ್ನಿಟ್ಟುಕೊಂಡಿದ್ದ. ಬರುತ್ತಿದ್ದ ಸಂಬಳ, ಮೇಲು ಸಂಪಾದನೆಯನ್ನು ಧಾರಾಳವಾಗಿ ಖರ್ಚುಮಾಡುತ್ತಲೂ ಇದ್ದ.

ಸಂಜೆ ಶಾಲೆಬಿಟ್ಟು ಹೊರಡುತ್ತಿದ್ದ ಶಾಮ, ಪಾಠದ ಮನೆಗಳಿಗೆ ಹೋಗಿ, ರಾತ್ರಿ ಎಂಟು ಗಂಟೆಗೆ ಮನೆ ಸೇರುತ್ತಿದ್ದ. ಅನ್ನ, ಹೊಟೇಲಿನ ಸಾರನ್ನೇ ಉಂಡು ತೃಪ್ತಿಪಟ್ಟುಕೊಳ್ಳುತ್ತಿದ್ದ.

ಅವನ ಕಾರ್ಪಣ್ಯಜೀವನ ನೋಡುತ್ತಿದ್ದ ಅಶ್ವತ್ಥನಾರಾಯಣ, ಒಂದು ದಿನ,

" ನಿಮ್ಮ ಮನೆಯವರು ಯಾವಾಗ ಬರುತ್ತಾರೆ ಶಾಮರಾವ್."

" ಐದನೆಯ ತಿಂಗಳಲ್ಲಿ ಬರುತ್ತಾರೆ."

" ನಿಮ್ಮ ಮಗುವಿಗೆ ನಾಲ್ಕು ತಿಂಗಳು ತುಂಬಿಲ್ಲವೇ ?"

" ನಾಲ್ಕನೆಯ ತಿಂಗಳು ನಡೆಯುತ್ತಿದೆ."

" ಅವರು ಬರುವುದಕ್ಕೆ ಒಂದು ವಾರ ಮುಂಚೆ ತಿಳಿಸಿಯಪ್ಪ—ರೂಮು ಬಿಟ್ಟುಬಿಡುತ್ತೇನೆ."

" ನೀವೇಕೆ ರೂಮ್ ಬಿಡಬೇಕು ಅಶ್ವತ್ಥನಾರಾಯಣ್ !"

" ಈ ಮನೆಯಲ್ಲಿರುವುದು ಒಂದೇ ರೂಮ್—ನಿಮಗೆ ಬೇಡವೇನ್ರಿ."

" ನಾವು ಹೇಗೋ ಮಾಡಿಕೊಳ್ಳುತ್ತೇವೆ - ನೀವು ರೂಮ್ ಬಿಡುವ ಅಗತ್ಯವಿಲ್ಲ."

" ಛಿ ! ಛಿ ! ಎಲ್ಲಿಯಾದರೂ ಉಂಟೆ ?- ನಾನು ಇರುವುದಿಲ್ಲಪ್ಪ—ನನ್ನಂಥ ಒಂಟಿ ಪಿಶಾಚಿಗಳು, ಹೆಂಗಸರು ಮಕ್ಕಳು ಇರುವ ಮನೆಯಲ್ಲಿರಬಾರದು."

ತಿಂಗಳು ತಿಂಗಳಿಗೆ ತಪ್ಪದೆ ಕೈಸೇರುತ್ತಿದ್ದ ಹನ್ನೆರಡು ರೂಪಾಯಿಗಳಿಗೆ ಸಂಚಕಾರ ಒದಗಿತಲ್ಲಾ ಎಂದು ರಾಮು ವ್ಯಥೆಗೊಂಡ.

" ನಾನೂ ನೀವೂ ಸ್ನೇಹಿತರು—ಸಹಾಧ್ಯಾಪಕರು. ಒಂದೆರಡು ಮಾತು ನಿಮಗೆ ಹೇಳಬೇಕೆಂದು ಬಹಳ ದಿವಸಗಳಿಂದ ಯೋಚಿಸುತ್ತಿದ್ದೇನೆ. ನೀವು ತಪ್ಪು ಭಾವಿಸುವುದಿಲ್ಲವೆಂದು ಭರವಸೆಯಿತ್ತರೆ ಹೇಳುತ್ತೇನೆ." -

" ಹೇಳಿ ಅಶ್ವತ್ಥ್."

" ಅಲ್ರೀ—ನಾನು ಸಂಪಾದಿಸುವ ಎರಡರಷ್ಟು ನೀವು ಸಂಪಾದಿಸುತ್ತಿದ್ದೀರಿ. ನಿಮ್ಮ ಅಣ್ಣಂದಿರೂ ಹಣ ಕಳಿಸಿಕೊಡುತ್ತಿದ್ದಾರೆ. ಯಾಕ್ರೀ ಈ ಕಾರ್ಪಣ್ಯ ಜೀವನ! ಈ ವಯಸ್ಸಿನಲ್ಲಿ ನೀವು ಚೆನ್ನಾಗಿ ತಿನ್ನಬೇಡವೇ—ನಾಲ್ಕು ಒಳ್ಳೆಯ ಬಟ್ಟೆ ಹಾಕಿಕೊಳ್ಳಬೇಡವೇ—ಟೆನ್ನಿಸ್ಸೋ ಬ್ಯಾಡ್‌ಮಿಂಟನ್ನೋ ಆಡಬೇಡವೇ ?"

" ನನ್ನ ಕಷ್ಟ ನಿಮಗೇನು ಗೊತ್ತು ಅಶ್ವತ್ಥನಾರಾಯಣ್. ಮೊನ್ನೆ ಮೂರು ಸಾವಿರಕ್ಕೆ ಇನ್‌ಷ್ಯೂರ್ ಮಾಡಿದ್ದೇನೆ. ಅದರ ಪ್ರೀಮಿಯಮ್ ತೆರಬೇಕು. ಈಗ ನನ್ನ ಸಂಸಾರ ದೊಡ್ಡದಾಯಿತು. ಮಗಳ ಮದುವೆಗೆ ಹಣ ಕೂಡಿಡಬೇಕು. ಬರುವುದನ್ನೆಲ್ಲಾ ನಾನೇ ಖರ್ಚುಮಾಡಿಬಿಟ್ಟರೆ, ಮುಂದಕ್ಕೇನು ಗತಿ ? ಬಾಡಿಗೆಯ ಮನೆಯಲ್ಲಿ ಎಷ್ಟು ದಿನ ಇರುವುದಕ್ಕಾಗುತ್ತದೆ ? ಒಂದು ಸೈಟು ತೆಗೆದುಕೊಂಡು ಮನೆ ಕಟ್ಟಬೇಕು. ಅದಕ್ಕೆ ಸಾಲಾಸೋಲಾ ಮಾಡಬೇಕಾಗತ್ತೆ—ಬಡ್ಡಿ ತೆರಬೇಕಾಗುತ್ತದೆ."

" ಅದೆಲ್ಲಾ ಸರಿಯಪ್ಪ, ನೀವು ಗಟ್ಟಿಗಡತನಾಗಿದ್ದರಲ್ಲವೇ ಮಗಳ ಮದುವೆ ಮಾಡೋದು—ಮನೆ ಕಟ್ಟೋದು !"

" ಈಗ ನನಗೇನಾಗಿದೆ–ಕಲ್ಲುಗುಂಡಿನ ಹಾಗಿದ್ದೇನಲ್ಲಾ !"

"ರಕ್ತ ಇನ್ನೂ ಬಿಸಿಯಾಗಿದೆ–ಈಗ ಗೊತ್ತಾಗುವುದಿಲ್ಲ. ಹೀಗೆ ಹೋಟಲು ಸಾರು ತಿನ್ನುತ್ತಾ ಇರಿ–ಆಮೇಲೆ ತಿಳಿಯತ್ತೆ! ನಾವು ಮಾಂಸ ಮಡ್ಡಿ ತಿನ್ನುವವರಲ್ಲ–ಹೇಳಿ ಕೇಳಿ ಪುಳಿಚಾರು ಹಾರವರು. ದೇಹಕ್ಕೆ ಪುಷ್ಟಿ ಕೊಡುವ ತರಕಾರಿ, ಹಾಲು, ಮೊಸರು, ತುಪ್ಪ ತಿನ್ನದಿದ್ದರೆ ದೇಹ ತಡೆಯುತ್ತೇನ್ರೀ –ನಾನು ನೋಡುತ್ತಿರುವಂತೆ ನೀವು ದಿನಕ್ಕೆ ೧೦–೧೨ ಗಂಟೆ ದುಡಿಯುತ್ತೀರಿ–ಇದರಿಂದ ಏನು ಸಾರ್ಥಕ. 'ದುಡ್ಡು ಮಾಡಬೇಕು' ಎನ್ನುವ ಒಂದೇ ಧ್ಯೇಯ ಇಟ್ಟುಕೊಂಡು ಹೊರಡುವುದು ಒಳ್ಳೆಯದಲ್ಲ ಶಾಮರಾವ್."

" ನನಗೆ ತಿನ್ನಬೇಕು–ಉಣ್ಣಬೇಕು–ಒಳ್ಳೊಳ್ಳೆ ಬಟ್ಟೆ ಹಾಕಿಕೊಳ್ಳಬೇಕು ಎನ್ನುವ ಆಸೆಯೇ ಇಲ್ರೀ."

" ಹೇಳುವುದು ಹೇಳಿದ್ದೇನಪ್ಪಾ–ಇದರ ಮೇಲೆ ನಿಮ್ಮ ಇಷ್ಟ."

ಸಂಭಾಷಣೆ ಅಪ್ರಿಯ ಮಾರ್ಗವನ್ನನುಸರಿಸಿದುದನ್ನು ಕಂಡ ಶಾಮು, ವಿಷಯಾಂತರ ಮಾಡಲು,

"ಹೆಡ್‌ಮಾಸ್ಟರ್ ಚಂದ್ರಶೇಖರಯ್ಯನವರು ಶಾಲೆಗೆ ರಾಜೀನಾಮೆ ಕೊಡುತ್ತಾರೆಂದು ಕೇಳಿದೆ ನಿಜವೇ ಅಶ್ವತ್ಥ್."

" ಏಕೆ ?"

" ಗೌರ್ನ್‌ಮೆಂಟ್ ಹೈಸ್ಕೂಲಿಗೆ ಅವರನ್ನು ತೆಗೆದುಕೊಳ್ಳುತ್ತಾರಂತೆ "!

" ಏನೋಪ್ಪ–ನನ್ನ ಕಿವಿ ಮೇಲೂ ಈ ಸುದ್ದಿ ಬಿತ್ತು–ನಾನು ನಂಬಲಿಲ್ಲ. ಹೆಡ್‌ಮಾಸ್ಟರು ನಿಮ್ಮ 'ಗಳಸ್ಯ ಕಂಠಸ್ಯ'–ನೀವೇ ಅವರನ್ನು ಕೇಳಿ ನೋಡಿ."

" ಕೇಳಿ ನೋಡಿದೆ–ಅವರು ಸರಿಯಾಗಿ ಉತ್ತರ ಕೊಡಲಿಲ್ಲ."

" ಅವರೇ ಇನ್ನೂ ನಿರ್ಧರಿಸಿಲ್ಲವೆಂದು ಕಾಣುತ್ತದೆ."

" ಅವರ ಸ್ಥಾನಕ್ಕೆ ಯಾರು ಬರುತ್ತಾರೆ ಅಶ್ವತ್ಥ್ ?"

" ಗೊತ್ತಿಲ್ಲಪ್ಪಾ–ನಮ್ಮ ಪೈಕಿ ಈಗ ಸೀನಿಯರ್ ಎಂದರೆ ರಾಮಕೃಷ್ಣ ರಾಯರು–ಅವರೇ ಬಂದರೂ ಬರಬಹುದು."

" ಈ ಕರಡಿ ಕೈಗೆ ಸಿಕ್ಕಿಕೊಂಡು ನಾವು ಬದುಕೋದು ಹೇಗ್ರೀ ?"

" ಯಾರು ಬಂದರೆ ನಮಗೇನು ಶಾಮರಾವ್. ನಮ್ಮ ಕೆಲಸ ನಾವು ಮಾಡಿಕೊಂಡು ಹೋದರಾಯಿತು "

ಎಂದು ಅಶ್ವತ್ಥನಾರಾಯಣ ನುಡಿದ.

# ೨೨

ಒಂದು ದಿನ ಬೆಳಿಗ್ಗೆ ಮೈಲಾರಯ್ಯ ತನ್ನ ಮನೆಯ ಹಜಾರದಲ್ಲಿ ಕುಳಿತು ಹಿಂದಿನ ದಿನದ ವೃತ್ತಪತ್ರಿಕೆಗಳನ್ನು ತಿರುವಿ ಹಾಕುತ್ತಿದ್ದ.

ಒಳಗೆ ಬಂದ ದಸ್ತಗೀರ್ ಟಪಾಲನ್ನು ಸಾಹೇಬರ ಮುಂದಿಟ್ಟು ಹೋದ.

ಮೈಲಾರಯ್ಯ ಕಾಗದಗಳ ಮೇಲೆ ಕೈಯಾಡಿಸಿ, ಉದ್ದನೆಯ ಲಕೋಟೆ ಯೊಂದನ್ನೆತ್ತಿಕೊಂಡು ಒಡೆದು ನೋಡಿ,

" ಜಾನಕೀ...." ಎಂದು ಕರೆದ.

ಜಾನಕಮ್ಮ ಬಂದು ಎದುರಿಗೆ ನಿಲ್ಲಲು ಮೈಲಾರಯ್ಯ,

" ದೊಡ್ಡ ಸಾಹೇಬರ ಆಫೀಸಿನಿಂದ ಕಾಗದ ಬಂದಿದೆ ಕಣೇ."

" ಏನಂತೆ ! ಮತ್ತೆ ವರ್ಗವೋ ?"

" ವರ್ಗವಲ್ಲ–ನನಗೆ ' ಪ್ರೆಸಿಡೆಂಟರ ಗೋಲ್ಡ್ ಮೆಡಲ್' (President's Gold Medal) ಕೊಡಲಾಗಿದೆಯಂತೆ–ಮುಂದಿನ ತಿಂಗಳು ದಿಲ್ಲೀಗೆ ಹೋಗಲು ಸಿದ್ಧವಾಗಬೇಕೆಂದು ಬರೆದಿದ್ದಾರೆ."

ಜಾನಕಮ್ಮ ಸಂತೋಷಭರಿತಳಾಗಿ ಕಾಗದವನ್ನು ಗಂಡನ ಕೈಯಿಂದ ತೆಗೆದುಕೊಂಡು ನೋಡಿ,

" ನಮ್ಮ ಮನೂ ಹುಟ್ಟಿದ ಗಳಿಗೆ ಒಳ್ಳೆಯದೊಂದ್ರೆ–ನಿಮಗೆ ದೊಡ್ಡ ಗೌರವ ಲಭಿಸಿತು–ಮುಂದೆ ಬಡ್ತಿಯೂ ಸಿಕ್ಕಬಹುದು."

" ಸಿಕ್ಕಬಹುದು...."

" ಏಕೆ–ನಿರುತ್ಸಾಹದಿಂದ ಮಾತಾಡುತ್ತಿದ್ದೀರಿ."

" ನಾನು ಕರ್ತವ್ಯಭ್ರಷ್ಟನಾದುದಕ್ಕೆ ಸನ್ಮಾನ...."

" ಪೋಲೀಸ್ ಡಿಪಾರ್ಟ್‌ಮೆಂಟ್ ನಿಮ್ಮ ಮೊದಲನೆಯ ಹೆಂಡತಿ, ನಾನು ಎರಡನೆಯ ಹೆಂಡತಿ ಆಗಿರುವಾಗ ಕರ್ತವ್ಯಭ್ರಷ್ಟತ್ವ ಎಲ್ಲಿಂದ ಬಂತು ?"

" ದೊಡ್ಡೇಗೌಡನ ಪ್ರಸಂಗ ಮರೆತುಬಿಟ್ಟೆಯಾ ?"

"ಅದರಿಂದ ನಿಮಗೆ ಅನುಕೂಲವೇ ಆಯಿತಲ್ಲಾ! ದೊಡ್ಡೇಗೌಡನ ಪ್ರಸಂಗ ನಡೆಯದಿದ್ದರೆ ನಾವು ನೋಲೂರಿಗೆ ಬರುವುದಕ್ಕೆ ಆಗುತ್ತಿತ್ತೇ?"

"ನಿನ್ನ ಲೆಕ್ಕಾಚಾರವೇ ನಿನಗೆ!"

"ದಿಲ್ಲೀಗೆ ಯಾವಾಗ ಹೋಗುವುದು."

"ಮುಂದಿನ ತಿಂಗಳು."

"ನಾನೂ ಬರುತ್ತೇನೆ. ಕಾಶಿ, ಪ್ರಯಾಗ, ಆಗ್ರಾ, ಬೃಂದಾವನ ಎಲ್ಲಾ ನೋಡಿದಂತಾಗುತ್ತದೆ."

"ನಾನು ಹೋಗುವುದು ನಿಶ್ಚಯವಾದ ಮೇಲಲ್ಲವೇ ನೀನು ಬರುವ ಮಾತು!"

"ಹಾಗಂದರೆ...."

"ಮೆಡಲನ್ನು ಏಕೆ ನಿರಾಕರಿಸಬಾರದು ಎಂದು ಯೋಚಿಸುತ್ತಿದ್ದೇನೆ."

ಕ್ಷಣಕಾಲ ಅವಾಕ್ಕಾದ ಜಾನಕಮ್ಮ, ಹುಬ್ಬುಗಂಟು ಹಾಕಿಕೊಂಡು,

"ನಾನು ಹೇಳಿದ್ದು ನಿಜ" ಎಂದಳು.

"ಏನು ನೀನು ಹೇಳಿದ್ದು."

"ನಿಮಗೆ ಸ್ವಲ್ಪ ಸ್ಕ್ರೂ ಲೂಸ್ ಎಂದು."

ಮೈಲಾರಯ್ಯ ಗಹಗಹಿಸಿ ನಕ್ಕ.

"ಪ್ರೆಸಿಡೆಂಟ್ ಮೆಡಲ್ ಸಿಕ್ಕೀತೆ ಎಂದು ನಿಮ್ಮ ಡಿಪಾರ್ಟ್‌ಮೆಂಟಿನವರೆಲ್ಲಾ ಬಾಯಿ ಬಾಯಿ ಬಿಡುತ್ತಾರೆ–ನೀವು ಮನೆಯ ಬಾಗಿಲಿಗೆ ಬಂದ ಭಾಗ್ಯಲಕ್ಷ್ಮಿಯನ್ನು ಕಾಲಿನಿಂದ ದೂಡುತ್ತಿದ್ದೀರಿ."

"ನಿಜ ಹೇಳಬೇಕೆಂದರೆ ಈ ಗೌರವ ಸ್ವೀಕರಿಸಲು ನನಗೆ ಸ್ವಲ್ಪವೂ ಇಷ್ಟವಿಲ್ಲ. ನೀನು...."

"ನಿಮ್ಮ ಮನಸ್ಸು ಬಂದಂತೆ ಮಾಡಿಕೊಳ್ಳಿ"

ಎಂದು ಮುನಿಸುಗೊಂಡು ಜಾನಕಮ್ಮ ಒಳಗೆ ಹೊರಟುಹೋದಳು.

ಅವಳನ್ನು ಹಿಂಬಾಲಿಸಿದ ಮೈಲಾರಯ್ಯ, ಅವಳ ಗಲ್ಲ ಹಿಡಿದು,

"ಎಷ್ಟು ಕೋಪವೇ ನಿನಗೆ?"

"ನಿಮ್ಮ ಮಾತು ಕೇಳಿ ಕೋಪ ಮಾಡಿಕೊಳ್ಳದೆ ಸಂತೋಷಪಡಲೇ?"

"ಮೆಡಲ್ ಸ್ವೀಕರಿಸುತ್ತೇನೆ–ದಿಲ್ಲಿಗೂ ಹೋಗೋಣ–ಇನ್ನಾದರೂ ನಗುನಗುತ್ತಾ ಇರು."

ಮುಗುಳ್ನಗೆ ತಳೆದ ಜಾನಕಮ್ಮ,

"ತೂಕಮಾಡಿದ ಹಾಗೆ ಸತ್ಯವಾಗಿರುವುದಕ್ಕೆ ಈ ಲೋಕದಲ್ಲಿ ಸಾಧ್ಯವೇ?

ನೀವೇ ಯೋಚಿಸಿ. ಕರ್ತವ್ಯ ನೀವು ಪಾಲಿಸಿದ್ದೀರಿ–ಮೇಲಧಿಕಾರಿಗಳು ಯಾವದೋ ಪ್ರಭಾವಕ್ಕೊಳಗಾಗಿ ನಿಮ್ಮ ಮಾತು ತೆಗೆದು ಹಾಕಿದರು. ಇದರಿಂದ ಅವರ ಗೌರವಕ್ಕೆ ಊನ ಬಂದಿತಲ್ಲದೆ ನಿಮಗೇನಾಯಿತು ?"

" ನನಗೇನೂ ಆಗಿಲ್ಲ ಜಾನಕಿ–ನನ್ನ ವಿಷಯವೇ ನಾನು ಯೋಚಿಸುತ್ತಿದ್ದರೆ ಪೋಲೀಸ್ ಡಿಪಾರ್ಟ್‌ಮೆಂಟಿನಲ್ಲಿ ಇದ್ದುಗೊಂಡು ಹೀಗೆ ಅಹನ್ಯಹನಿ ಕಾಲಕ್ಷೇಪ ಮಾಡಬೇಕಾಗಿರಲಿಲ್ಲ. ನನ್ನ ಸಂಪತ್ತು ಬೆಳಸುವುದಕ್ಕೆ ಭರಮೇಗೌಡ, ದೊಡ್ಡೇಗೌಡ ಸಿದ್ಧನಾಗಿದ್ದರು. ನಿನಗೇ ಗೊತ್ತಿರುವಂತೆ ಭರಮೇಗೌಡ ಕೊಡುತ್ತಿದ್ದ ' ಮಾಮೂಲ 'ನ್ನೂ ನಾನು ಡಿಪಾರ್ಟ್‌ಮೆಂಟಿಗೇ ಕಳಿಸುತ್ತಿದ್ದೆ. ನಿಷ್ಠೆ ಹತೆ, ಸತ್ಯ, ನ್ಯಾಯಕ್ಕೆ ಬೆಲೆಯಿಲ್ಲವಾದ ಮೇಲೆ ಲೋಕ ಬದುಕುವುದು ಹೇಗೆ ?– ಪೋಲೀಸ್ ಡಿಪಾರ್ಟ್‌ಮೆಂಟಿನವರು ನನಗೆ ಸಾವಿರಾರು ರೂಪಾಯಿ ಸಂಬಳ ಕೊಡುತ್ತಿಲ್ಲ–ಕೆಲಸ ಹೋದರೂ ನಾನು ಯೋಚಿಸುವುದಿಲ್ಲ. ಇಷ್ಟು ಹಣ ಬೇರೆ ಕಡೆ–ನ್ಯಾಯವಾಗಿ ಸಂಪಾದಿಸುವ ಧೈರ್ಯ ನನಗಿದೆ.–ಲಂಚ ರುಷವತ್ತು ಪಡೆದು ಪಾಪಜೀವನ ನಡೆಸುವುದಕ್ಕೆ ಮನಸ್ಸು ಒಪ್ಪುವುದಿಲ್ಲ– ಹಾಗೆ ಮಾಡದಿದ್ದರೆ ಬದುಕುವುದೇ ಸಾಧ್ಯವಿಲ್ಲ. ಈ ವಿಷವ್ಯೂಹದಿಂದ ಪಾರಾಗುವುದು ಹೇಗೆ ?"

ಜಾನಕಮ್ಮನ ಕಣ್ಣುಗಳಲ್ಲಿ ಕರುಣಾಶ್ರುಗಳು ತುಂಬಿದವು.

ಸತ್ಯಪ್ರಿಯನಾದ ತನ್ನ ಪತಿಯ ಮನಸ್ಸಿನ ಆಂದೋಳನ ಅವಳ ಅಂತಃಕರಣವನ್ನು ಕೆರಳಿಸಿತು.

" ಮೊದಲು ಸ್ವೀಕರಿಸಿ ಎಂದು ನಾನು ಒತ್ತಾಯ ಪಡಿಸುವುದಿಲ್ಲಾಂದ್ರೆ– ನಾನು ತಪ್ಪು ಆಡಿದೆ–ಕ್ಷಮಿಸಿ. ನೀವು ಹೇಳುವುದು ನಿಜ–ಸತ್ಯ–ಧರ್ಮ ರಕ್ಷಣೆಗೆ ಯಾರೂ ಹೋರಾಡದಿದ್ದರೆ ಲೋಕ ಪಾಪಾಗುತ್ತದೆ."

ಕ್ಷಣಕಾಲ ಯೋಚಿಸಿದ ಮೈಲಾರಪ್ಪ,

" ಮೊದಲು ಸ್ವೀಕರಿಸುತ್ತೇನೆ ಜಾನಕಿ. ನನ್ನ ಮೇಲೆ ಅಭಿಮಾನವಿಟ್ಟಿರುವ ಸಾಹೇಬರ ಮನಸ್ಸು ನೋಯಿಸುವ ಇಷ್ಟವಿಲ್ಲ"

ಎಂದು ಹೇಳಿದ.

# ೨೩

ಮೈಲಾರಯ್ಯನಿಗೆ ಲಭಿಸಿದ್ದ ಗೌರವ ತಮ್ಮ ಊರಿಗೆ ಲಭಿಸಿದ್ದ ಗೌರವವೆಂದು ಸೋಲೂರಿನ ಜನ ಭಾವಿಸಿದರು.

ಹಾಗವರು ಭಾವಿಸುವುದು ನ್ಯಾಯವಾಗಿಯೂ ಇತ್ತು. ಮೈಲಾರಯ್ಯನ ಪ್ರತಿಭೆ ಅಭಿವ್ಯಕ್ತವಾದುದು ಭರಮೇಗೌಡನ ಮೊಕದ್ದಮೆಯಲ್ಲಿ–ಸೋಲೂರಿನಲ್ಲಿ!

ಐದನೆಯ ತಿಂಗಳು ತುಂಬವುದರೊಳಗಾಗಿ ಸುಭದ್ರಾ, ಅವಳ ಮಗು ಪ್ರಯಾಣ ಬೆಳಸಬೇಕಾಗಿತ್ತು. ಎಲ್ಲರೂ ಒಟ್ಟಿಗೆ ಹೊರಡುವುದೆಂದೂ, ಅಂಬಮ್ಮ, ಸುಭದ್ರ, ಮಗುವನ್ನು ಬೆಂಗಳೂರಿನಲ್ಲಿ ಬಿಟ್ಟು ತಾನೂ ಜಾನಕಿ ಮುಂದಕ್ಕೆ ಪ್ರಯಾಣ ಬೆಳಸುವುದೆಂದೂ ಮೈಲಾರಯ್ಯ ನಿಶ್ಚಯಿಸಿದ.

ಅದೇ ಹಾಸಿಗೆ ಬಿಟ್ಟು ಎದ್ದಿದ್ದ ಬಾಣಂತಿಗೆ ಅಗಚಾಟಲು ಆದೀತೆಂದು ಮೈಲಾರಯ್ಯ ಬೆಂಗಳೂರಿನಿಂದ ಒಂದು ಟ್ಯಾಕ್ಸಿ ತರಿಸಿ, ಎಲ್ಲರೊಂದಿಗೆ ಹೊರಟ.

ಮೈಲಾರಯ್ಯ, ಜಾನಕಮ್ಮ ಇಬ್ಬರಿಗೂ ಬೆಂಗಳೂರಿನಲ್ಲಿ ಒಂದೆರಡು ದಿನಗಳ ಕೆಲಸವಿತ್ತು. ಅದನ್ನು ಮುಗಿಸಿಕೊಂಡು, ಮದರಾಸ್ ಮೈಲ್‌ನಲ್ಲಿ ನೇರವಾಗಿ ದಿಲ್ಲೀಗೆ ಪ್ರಯಾಣ ಬೆಳಸಲು ಅವರು ನಿಶ್ಚಯಿಸಿದರು.

ಶಾಮು ತನ್ನ ಬಗ್ಗೆಯಾಗಲಿ, ಮಗುವಿನ ಬಗ್ಗೆಯಾಗಲಿ ಹೆಚ್ಚು ಉತ್ಸಾಹ ತೋರಿಸದಿದ್ದುದನ್ನು ಕಂಡು ಸುಭದ್ರೆಯ ಮನಸ್ಸಿಗೆ ವಿಷಾದವಾಯಿತು.

ಒಂದು ದಿನ ಅವಳು ಮಗುವನ್ನೆತ್ತಿಕೊಂಡು, ಗಂಡನ ಬಳಿಗೆ ಹೋಗಿ, ಮಗುವನ್ನು ಅವನ ಮುಂದೆ ಹಿಡಿದು,

"ಮಗೂ ಚೆನ್ನಾಗಿಲ್ಲವೇ ?"

ಎಂದು ಕೇಳಿದಳು.

"ಚೆನ್ನಾಗಿಲ್ಲವೆಂದು ಯಾರು ಹೇಳಿದರು ?"

"ನೀವು ಮಗುವನ್ನು ಎತ್ತಿಕೊಳ್ಳಲೇ ಇಲ್ಲ."

"ಇಷ್ಟು ಸಣ್ಣ ಮಕ್ಕಳನ್ನು ಎತ್ತಿಕೊಳ್ಳುವುದಕ್ಕೆ ನನಗೆ ಭಯವಾಗುತ್ತದೆ ಸುಭದ್ರಾ."

" ಭಯವಾಗುತ್ತದೆಂದರೆ ಹೇಗೆ ?–ಅಭ್ಯಾಸಮಾಡಿಕೊಳ್ಳಬೇಕು."

" ಅದಕ್ಕಿನ್ನೂ ಬೇಕಾದಷ್ಟು ಪುರಸತ್ತು ಇದೆಯಲ್ಲಾ !"

ಎಂದುಬಿಟ್ಟೆ.

ಸುಭದ್ರೆಯ ಮನಸ್ಸಿನಲ್ಲಿ ಮೂಡಿದ್ದ ದುಃಖವನ್ನರಿತ ಜಾನಕಮ್ಮ, ಮಗುವನ್ನೆತ್ತಿಕೊಂಡು, ಶಾಮನ ಬಳಿಗೆ ಬಂದು, ಅವನ ತೊಡೆಯ ಮೇಲೆ ಇಳುಹಿ,

" ಹೀಗೆ ಎತ್ತಿಕೋ–ಕುತ್ತಿಗೆ ಕೆಳಗೆ ಕೈಕೊಡು " ಎಂದಳು.

" ಮಗುವನ್ನು ಕರೆದುಕೋ ಅತ್ತಿಗೆ–ನನಗೆ ಹೇಗೆ ಹೇಗೋ ಆಗುತ್ತಿದೆ."

" ಸಾಕು ಸುಮ್ಮನಿರೋ...."

" ಅತ್ತಿಗೇ...."

" ಏನು ಶಾಮೂ...."

" ಕೊಟ್ಟುಬಿಟ್ಟಳು–ತೀರ್ಥ...."

ಅವನ ತೊಡೆಯ ಮೇಲಿದ್ದ ಮಗುವನ್ನು ಜಾನಕಮ್ಮ ನಸುನಗುತ್ತ ಎತ್ತಿಕೊಂಡಳು.

" ಥೂ....ಪಂಚೆ, ಪರಟೆಲ್ಲಾ ಉಚ್ಚೆ ಆಗಿಹೋಯ್ತು."

" ನಿನ್ನ ಕುಲಕೋಟಿ ಪಾವನವಾಯಿತು ಸುಮ್ಮನಿರು."

" ನೀನು ಅಣ್ಣ ದಿಲ್ಲಿಗೆ ಹೊರಡುವುದು ನನಗೆ ಮೊದಲೇ ಗೊತ್ತಾಗಿದ್ರೆ ನಾನೂ ಬರುತ್ತಿದ್ದೆ ಅತ್ತಿಗೆ."

" ಸುಭದ್ರಾ ಒಬ್ಬಳನ್ನೇ ಬಿಟ್ಟು...."

" ಅವರಮ್ಮ ಇದ್ದಾರಲ್ಲಾ !"

" ಅವರಮ್ಮ ಇದ್ದರೆ ನೀನು ಇದ್ದ ಹಾಗೆ ಆಯಿತೇ ?"

" ಹೋಗಲಿ ಬಿಡು–ನನ್ನ ಕರ್ಕೊಂಡು ಹೋಗೋದಿಕ್ಕೆ ನಿನಗೆ ಇಷ್ಟವಿಲ್ಲ."

" ಖಂಡಿತವಾಗಿ ಇಷ್ಟವಿಲ್ಲ."

" ಏಕೆ ಅತ್ತಿಗೆ ನೀನು ಹೀಗಾಗಿಬಿಟ್ಟೆ !"

" ಏನು ಆದೆನೋ ?"

" ಸುಭದ್ರಂಗೂ ನನಗೂ ಮದುವೆ ಆದದ್ದೇ ಆದದ್ದು–ನೀನು ನನ್ನ ದೂರ ಮಾಡಿದೆ–ಮಗೂ ಹುಟ್ಟಿದ ಮೇಲಂತೂ ನಾನು ನಿನಗೆ ತೀರ ಹೊರಗಿನವನಾದೆ."

" ನೀನು ಮೊದಲಿನ ಹಾಗೆ ಎಳೆಯ ಮಗುವೇ–ಈಗ ನಿನ್ನ ಎತ್ತಿಕೊಂಡು

ಮುದ್ದಿಸುವುದಕ್ಕಾಗುತ್ತದೆಯೆ? ಮನೂನ ಮುದ್ದಿಸಿದರೆ, ನಿನ್ನ ಮುದ್ದಿಸಿದ ಹಾಗಲ್ಲವೇನೋ ಹುಚ್ಚಾ!–ಇನ್ನುಮೇಲಾದರೂ ನೀನು 'ನಾನು ನಾನು' ಅನ್ನುವುದನ್ನು ಕಡಿಮೆಮಾಡಬೇಕು. ಈಗ ಶೀನು ಎನ್ನುವ ವ್ಯಕ್ತಿಯಲ್ಲಿ ಸುಭದ್ರಾ, ಮನೂ ಸೇರಿಕೊಂಡಿದ್ದಾರೆ. ಮೊದಲು ಅವರ ವಿಷಯ ಯೋಚಿಸ ಬೇಕಾದುದು ನಿನ್ನ ಧರ್ಮ."

"ನಾನು ಸುಭದ್ರನಿಗೇನು ಕಡಿಮೆ ಮಾಡಿದ್ದೇನೆ."

"ಕಡಿಮೆಯಂತೆ ಕಡಿಮೆ–ಅವಳಿಗೇನು ಸೀಮಾಭರಣ ಮಾಡಿಸಿ ಹಾಕಿದ್ದೀಯಾ?"

"ನನಗೆ ಬರೋ ನೂರುರೂಪಾಯಿ ಸಂಬಳದಲ್ಲಿ ಸಿಲುವಾಭರಣ ಮಾಡಿ ಸಿದ ಹಾಗೇ!"

"ದೇವರು ಕೈತುಂಬ ಕೊಟ್ಟಾಗ ಆಭರಣ ಮಾಡಿಸುವೆಯಂತೆ–ಅದಕ್ಕೇನೂ ಅವಸರವಿಲ್ಲ. ಹೆಂಡತಿ, ಮಗುವನ್ನು ಪ್ರೀತಿಯಿಂದ ನೀನು ನೋಡಿ ಕೊಂಡರೆ ಸಾಕು–ಪಾಠ ಕಲಿಯುವುದಕ್ಕೆ ನೀನು ಹೊರಗೆ ಹೋಗಬೇಕಾಗಿಲ್ಲ–ನಿಮ್ಮಣ್ಣನವರನ್ನು ನೋಡಿದರೆ ಸಾಕು ..."

"ನೀನು ಎಲ್ಲಾ ತಿಳಿದುಕೊಂಡು, ನಿಭಾಯಿಸುತ್ತಿರುವ ಹೊತ್ತಿಗೇ ಅಣ್ಣಾ........"

"ಹುಚ್ಚಾ–ನನಗೆ ತಿಳುವಳಿಕೆ ಬಂದದ್ದು ಯಾವಾಗ–ಆ ತಿಳುವಳಿಕೆ ಉಂಟು ಮಾಡಿದವರು ಯಾರು?–ನಾನು ಈ ಮನೆಗೆ ಬಂದಾಗ, ಒಂದು ಅನ್ನ ಸಾರು ಮಾಡುವುದಕ್ಕೆ ಬರುತ್ತಿರಲಿಲ್ಲ. ನಮ್ಮಮ್ಮ ಅಪ್ಪ ಮುದ್ದಿಸಿ ಮುದ್ದಿಸಿ ನನ್ನ ಮೂದೇವಿ ಮಾಡಿದ್ದರು. ಆಗ ನಿಮ್ಮಣ್ಣ ಸಬ್ ಇನ್ಸ್‌ಪೆಕ್ಟರ್! ನನ್ನ ಅಡಿಗೆ ಮುಗಿಯುತ್ತಲೇ ಇರಲಿಲ್ಲ–ಅವರು ಅನ್ನ ಕಾಯುತ್ತಲೂ ಇರಲಿಲ್ಲ. ಮಾರಾಯರು, ಒಂದು ದಿನವೂ ಬೇಸರಪಟ್ಟುಕೊಳ್ಳುತ್ತಿರಲಿಲ್ಲ. ಸಾರು ಆಗಿರದಿದ್ದರೆ ಅನ್ನ ತುಪ್ಪ ಉಪ್ಪು ಹಾಕಿಕೊಂಡು ಊಟಮಾಡಿ ಏಳುತ್ತಿದ್ದರು. ಪುರಸತ್ತಿದ್ದ ದಿನ ಅವರೇ ಅಡಿಗೆ ಮಾಡಿಬಿಡುತ್ತಿದ್ದರು. ಅವರೇ ನನಗೆ ಅಡಿಗೆ ಯೆನ್ನೂ ಹೇಳಿ ಕೊಟ್ಟದ್ದು. ಈಗಲೂ ನಾನು ಒಮ್ಮೊಮ್ಮೆ ಸಿಟ್ಟಾಗಿ ಬಿಡು ತ್ತೇನೆ–ಅವರು ನಕ್ಕು 'ಬಲು ಕೋಪ ಕಣೇ ನಿನಗೆ' ಎಂದುಬಿಡುತ್ತಾರೆ. ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು, ಪರಸ್ಪರ ಕಷ್ಟಸುಖ ವಿಚಾರಿಸಿಕೊಳ್ಳ ದಿದ್ದರೆ ಸಂಸಾರದಲ್ಲಿ ಸುಖವಿರುತ್ತದೆಯೇ?"

"ಸುಭದ್ರಾ ನನ್ನ ಮೇಲೆ ಏನೋ ಚಾಡಿ ಹೇಳಿದ್ದಾಳೆ ಎಂದು ಕಾಣುತ್ತದೆ."

“ ಛೆ! ಛೆ! ಅವಳು ಬಾಯಿಬಿಟ್ಟಿಲ್ಲ ಕಣೋ. ನಿನ್ನ ಅವಿವೇಕ ನಾನೇ ಕಣ್ಣಾರೆ ನೋಡುತ್ತಿರುವಾಗ ಇನ್ನೊಬ್ಬರು ಚಾಡಿ ಏಕೆ ಹೇಳಬೇಕು. ಸುಭದ್ರಾ ಒಳ್ಳೆಯ ಹುಡುಗಿ–ಮಹಾಪತಿವ್ರತೆಯ ಮಗಳು–ಯಾವ ಕಾರಣಕ್ಕೂ ಅವಳ ಕಣ್ಣಲ್ಲಿ ನೀರು ಹಾಕಿಸಬೇಡ ರಾಮೂ. ಅವಳು ತಪ್ಪು ಮಾಡಿದರೂ ನೀನು ಸಹಿಸಿಕೊಳ್ಳಬೇಕು.”

“ ನೀನೂ ನನ್ನ ಮೇಲೆ ದುರ್ಜನ ಹೊರೆಸುತ್ತೀಯಾ ಅತ್ತಿಗೆ ?”

“ ನೀನು ತಪ್ಪು ತಿಳಿದುಕೊಳ್ಳುವ ಹಾಗಿದ್ದರೆ ನಾನು ಯಾವ ಮಾತೂ ಆಡಲ್ಲಪ್ಪ.”

“ ಹೋಗಲಿ ಬಿಡು ಅತ್ತಿಗೆ–ನೀನು ಮನಸ್ಸಿಗೆ ಬೇಸರ ತಂದುಕೊಳ್ಳ ಬೇಡ. ನಿನ್ನ ಬುದ್ಧಿವಾದದಂತೆ ನಡೆದುಕೊಳ್ಳುತ್ತೇನೆ ”

ಎಂದು ಆಶ್ವಾಸನವಿತ್ತ.

## ೨೪

ಬೆಂಗಳೂರಿನಿಂದ ಹೊರಟ ಮೈಲಾರಯ್ಯ, ಜಾನಕಮ್ಮ ಮದರಾಸಿನ ಮಾರ್ಗವಾಗಿ ದಿಲ್ಲಿ ತಲುಪಿದರು. ಪೂರ್ವಭಾವಿಯಾಗಿ ನಿಶ್ಚಯವಾಗಿದ್ದ 'ವೆಲ್‌ಕಂ ಹೊಟೇಲಿ'ಗೆ ಹೋಗಿ ಇಬ್ಬರೂ ತಂಗಿದರು.

ಎರಡು ದಿನಗಳ ತರುವಾಯ ಇದ್ದ 'ಪದಕದಾನ' ಸಮಾರಂಭ ಮುಗಿಸಿ ಕೊಂಡು, ದಿಲ್ಲಿಯ ನೋಟಗಳನ್ನು ನೋಡಿಕೊಂಡು ಕಾಶಿಗೆ ಹೋಗಲು ಅವರು ನಿಶ್ಚಯಿಸಿದರು.

'ಪದಕದಾನ' ಸಮಾರಂಭ ಕಂಡು ಜಾನಕಮ್ಮ ಆನಂದಪರವಶಳಾದಳು. ಮೈಲಾರಯ್ಯ ರಾಷ್ಟ್ರಪತಿಗಳ ಅಮೃತ ಹಸ್ತದಿಂದ ಪದಕ ಸ್ವೀಕರಿಸಿದ ದೃಶ್ಯ ಅವಳ ಮನದಲ್ಲಿ ಸ್ಥಿರವಾಗಿ ನೆಲಸಿತು.

ಆಮಂತ್ರಿತರಾಗಿ ಸಮಾರಂಭಕ್ಕೆ ಬಂದಿದ್ದ ಕನ್ನಡಿಗರು, ದಿಲ್ಲಿ ಕರ್ನಾಟಕ ಸಂಘದ ಅಧಿಕಾರಿಗಳು, ಮೈಲಾರಯ್ಯನಿಗೆ ಅಭಿನಂದನೆ ಸಮರ್ಪಿಸಿ,

"ನಿಮಗೆ ಈ ಗೌರವ ದೊರೆತಿರುವುದು ಕನ್ನಡಿಗರೆಲ್ಲರಿಗೂ ಅಭಿಮಾನಾಸ್ಪದವಾದುದು. ಸಂಘದ ಆಶ್ರಯದಲ್ಲಿ ತಮಗೊಂದು 'ಸನ್ಮಾನ ಸಮಾರಂಭ' ಏರ್ಪಡಿಸಬೇಕೆಂದಿದ್ದೇವೆ–ತಾವು ದಯೆಯಿಟ್ಟು ಒಪ್ಪಿಕೊಳ್ಳಬೇಕು"

ಎಂದು ಪ್ರಾರ್ಥಿಸಿದರು.

ಅವರ ಪ್ರೀತಿಪೂರ್ವಕ ಒತ್ತಾಯಕ್ಕೆ ಕಟ್ಟುಬಿದ್ದು ಮೈಲಾರಯ್ಯ ಒಪ್ಪಿ ಕೊಂಡ.

ಸಮಾರಂಭ ದಿಲ್ಲಿಯ 'ಕಾನ್ಸ್ಟಿಟ್ಯೂಷನ್ ಕ್ಲಬ್ಬಿನ' ಸಭಾಭವನದಲ್ಲಿ ವ್ಯವಸ್ಥಿತವಾಯಿತು. ಮೈಸೂರಿನಿಂದ ಆಯ್ಕೆಯಾಗಿದ್ದ ಲೋಕಸಭಾ ಸದಸ್ಯರು ಶ್ರೀ ಗುರುಮೂರ್ತಿಯವರು ಅಧ್ಯಕ್ಷತೆ ವಹಿಸಲು ಒಪ್ಪಿಕೊಂಡಿದ್ದರು.

ಸಭಾಮಂದಿರ ತುಂಬಿ ತುಳುಕಾಡುತ್ತಿತ್ತು.

ಲೋಕಸಭೆಯ ಕನ್ನಡ ಸದಸ್ಯರು, ದಿಲ್ಲಿಯ ಸನ್ಮಾನ್ಯ ಕನ್ನಡಿಗರು,

ಕೇಂದ್ರದಲ್ಲಿ ಮಂತ್ರಿಗಳಾಗಿದ್ದ ಇಬ್ಬರು ಕನ್ನಡಿಗರು, ಸರ್ಕಾರದ ಶ್ರೇಷ್ಠ ಜೇಷ್ಠ ಸ್ಥಾನಗಳಲ್ಲಿದ್ದ ಕನ್ನಡಿಗರು ಉಪಸ್ಥಿತರಾಗಿದ್ದರು.

ಪ್ರಾರ್ಥನೆ, ಸಂಗೀತ ಮುಗಿದ ಮೇಲೆ ಕಾರ್ಯದರ್ಶಿಗಳಾದ ರಾಮಸ್ವಾಮಿಯವರು ಮೈಲಾರಯ್ಯನನ್ನು ಪ್ರಶಂಸಿಸಿ ಅವನ ಪರಿಚಯ ಮಾಡಿಕೊಟ್ಟರು. ಅಧ್ಯಕ್ಷರು ಪ್ರಾಸ್ತಾವಿಕ ಭಾಷಣ ಮಾಡಿ,

"ಎಲ್ಲ ರಂಗಗಳ ಮುಂದಾಳುತನವನ್ನೂ ಮೈಸೂರಿನವರು ವಹಿಸಿಕೊಳ್ಳಬೇಕು"

ಎಂದು ಸಾರಿದರು.

ಅಧ್ಯಕ್ಷರ ಹಸ್ತದಿಂದಲೇ ಮುಖ್ಯ ಅತಿಥಿಗಳಿಗೆ ಹಾರ, ತುರಾಯಿ ಅರ್ಪಣೆಯಾದ ಮೇಲೆ, ನಾಲ್ಕು ಮಾತು ಆಡಬೇಕೆಂದು ಕಾರ್ಯದರ್ಶಿಗಳು ಮೈಲಾರಯ್ಯನನ್ನು ಪ್ರಾರ್ಥಿಸಿದರು.

ಮೈಲಾರಯ್ಯನಿಗೆ ಆಪಾದಮಸ್ತಕ ಬೆವರೇರಿತು.

"ನನಗೆ ಭಾಷಣ ಮಾಡುವ ಅಭ್ಯಾಸವಿಲ್ಲ ಕಾರ್ಯದರ್ಶಿಗಳೇ ಕ್ಷಮಿಸಿ."

"ನಾಲ್ಕು ಮಾತಾಡಿ ಸಾರ್–ಸಾಕು. ಎಲ್ಲರೂ ನಿಮ್ಮ ಭಾಷಣ ಕೇಳಲು ಕುತೂಹಲಿಗಳಾಗಿದ್ದಾರೆ."

ವೇದಿಕೆಯ ಮೇಲೆ, ಮೈಲಾರಯ್ಯನ ಬಳಿ ಕುಳಿತಿದ್ದ ಜಾನಕಮ್ಮ ಮೆಲ್ಲನೆ,

"ಎಷ್ಟು ಉಪಚಾರ ಹೇಳಿಸಿಕೊಳ್ಳುತ್ತೀರಿ. ನಾಲ್ಕು ಮಾತು ಆಡಿ" ಎಂದಳು.

ನಿರ್ವಾಹವಿಲ್ಲದೆ ಮೈಲಾರಯ್ಯ ಮೇಲಕ್ಕೆ ಎದ್ದು ನಿಂತ.

ಸಭಾಸದರು ಪ್ರಚಂಡ ಕರತಾಡನದಿಂದ ಅವನನ್ನು ಅಭಿನಂದಿಸಿದರು.

"ಮಾನ್ಯ ಮಹನೀಯರೇ, ಮಹಿಳೆಯರೇ,

ನನ್ನ ಅವಸ್ಥೆ ಏನಾಗಿದೆಯೆನ್ನುವುದು ನನಗೆ ಗೊತ್ತು–ಭಗವಂತನಿಗೆ ಗೊತ್ತು. ಇಂದು ನಾನು ಭಾಷಣ ಮಾಡಬೇಕೆಂದು ಕಾರ್ಯದರ್ಶಿಗಳು ಮೊದಲೇ ತಿಳಿಸಿದ್ದರೆ ನಾನು ಸಮಾರಂಭಕ್ಕೇ ಬರುತ್ತಿರಲಿಲ್ಲ.

ನನಗೆ ಭಾಷಣ ಮಾಡುವ ಅಭ್ಯಾಸವಿಲ್ಲ. ನಮ್ಮ ಪೋಲೀಸ್ ಸಮಾರಂಭಗಳಲ್ಲಿ ಒಂದೆರಡು ಬಾರಿ ಮಾತನಾಡಿದ್ದೇನೆ. ಆದರದು ಮಿತ್ರಗೋಷ್ಠಿ. ಏನು ಆಡಿದರೂ ನಡೆದುಹೋಗುತ್ತದೆ.

ಇಂದು ಇಲ್ಲಿ ಮಾನ್ಯ ಮಂತ್ರಿಗಳು, ರಾಜಕಾರಣ ಪಟುಗಳು, ಕಲಾವಿದರು, ಸಾಹಿತಿಗಳು, ವಿದ್ವಾಂಸರು, ವಣಿಕ ಚಕ್ರವರ್ತಿಗಳು,

ಸಮಾಜಸೇವಾ ಧುರೀಣರೂ ಸೇರಿದ್ದರು. ತಮ್ಮ ಮುಂದೆ ಸಾಧಾರಣ ಪೋಲೀಸ್ ಅಧಿಕಾರಿಯಾದ ನಾನು ಏನು ಮಾತಾಡಲಿ ?

ನನ್ನ ಬಾಲಭಾಷೆಯಲ್ಲಿ, ಅಪ್ರಬುದ್ಧ ವಿಚಾರ ಲಹರಿಯಲ್ಲಿ ದೋಷಗಳಿದ್ದರೆ ತಾವು ' ಹಂಸಕ್ಷೀರ ನ್ಯಾಯ 'ದಂತೆ ಗುಣ ಸಂಗ್ರಹಿಸಿ, ದೋಷಗಳನ್ನು ಮರೆಯಬೇಕು.

ನಮ್ಮ ರಾಷ್ಟ್ರದ ಮಹಾನಾಯಕರಾದ ರಾಷ್ಟ್ರಪತಿಗಳ ಅಮೃತ ಹಸ್ತದಿಂದ ಪದಕ ಸ್ವೀಕರಿಸಿದ ದಿನ ನನ್ನ ಜನ್ಮದ ಸುಸ್ಮರಣೀಯ ದಿನವೆಂದು ಭಾವಿಸುತ್ತೇನೆ. ಈ ಭಾಗ್ಯ ನನಗೆ ಲಭಿಸುವಂತೆ ಮಾಡಿದ ನನ್ನ ಮೇಲಧಿಕಾರಿಗಳಿಗೆ ಕೃತಜ್ಞತೆ ಸಮರ್ಪಿಸುವುದು ನನ್ನ ಪ್ರಥಮ ಕರ್ತವ್ಯ.

ಈ ಗೌರವ ನಿಜವಾಗಿ ನನ್ನ ಮೇಲಧಿಕಾರಿಗಳೂ ನನ್ನ ಶೀರ್ಷರೂಪ ಸಮಾನರೂ ಆದ ಶ್ರೀ ಸುಬ್ಬರಾಮಯ್ಯನವರಿಗೆ ಸಲ್ಲಬೇಕಾಗಿತ್ತು. ಅವರು ಹಿಂದಕ್ಕೆ ಸರಿದು ಈ ಶಿಷ್ಯನನ್ನು ಮುಂದಕ್ಕೆ ನೂಕಿದ್ದಾರೆ.

ನನ್ನ ಜೀವನದ ಅರ್ಧಭಾಗ ಈಗಾಗಲೇ ಪೋಲೀಸ್ ಇಲಾಖೆಯಲ್ಲಿ ಕಳೆದುಹೋಗಿದೆ. ಉಳಿದರ್ಧ ಭಾಗವನ್ನೂ ಅಲ್ಲೇ ಕಳೆಯುತ್ತೇನೆಂದು ನಂಬಿದ್ದೇನೆ. ಈ ಸಂದರ್ಭದಲ್ಲಿ ನನ್ನ ಒಂದೆರಡು ಅನುಭವಗಳನ್ನು ನಿರೂಪಿಸಿದರೆ ಅಪ್ರಕೃತವಾಗಲಾರದು.

ಬ್ರಿಟಿಷರ ಕಾಲದಲ್ಲಿ ನಮಗಿದ್ದ ಸ್ಥಾನಮಾನಗಳಿಗೂ, ಈಗ ನಮಗಿರುವ ಸ್ಥಾನಮಾನಗಳಿಗೂ ಮಹದಂತರವಿದೆ. ಆಗ ನಾವು ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ರಕ್ಷಿಸುವ ' ಪಂಚಮದಳ 'ದವರಾಗಿದ್ದೆವು. ನಮ್ಮ ಜನರನ್ನೇ ನಾವು ಹಿಂಸಿಸುತ್ತಿದ್ದೆವು–ಅವರ ಕಾರ್ಯಕ್ರಮಗಳನ್ನು ಸರ್ಕಾರಕ್ಕೆ ವರದಿ ಮಾಡುವ ಗೂಢಚಾರರಾಗಿದ್ದೆವು. ನಾವು ಭಾರತೀಯ ರಾಗಿದ್ದರೂ ಆ ಭಾವನೆ ನಮ್ಮಲ್ಲಿರಲಿಲ್ಲ; ಜನರಂತೂ ನಮ್ಮನ್ನು ಪರಮ ಶತ್ರುಗಳೆಂದು ಭಾವಿಸುತ್ತಿದ್ದರು.

ಈಗ ನಾವು ಬ್ರಿಟಿಷ್ ಸಾರ್ವಭೌಮ ಸರ್ಕಾರದ ವಿಕ್ರೀತ ದಾಸರಾಗಿಲ್ಲ. ಭಾರತ ರಾಜ್ಯಾಂಗ ಘಟನೆಯ ಒಂದು ಅಂಗವಾಗಿದ್ದೇವೆ. ನಮ್ಮ ಜನರ ಸೇವಕರಾಗಿದ್ದೇವೆ. ದೇಶದ ಶಾಂತಿ ಶಿಸ್ತನ್ನು ಕಾಪಾಡುವ ಪವಿತ್ರ ಕಾರ್ಯನಿರ್ವಾಹಕರಾಗಿದ್ದೇವೆ. ನಾವು ಪೋಲೀಸಿನವರಾಗಿರು ವಂತೆ, ಭಾರತದ ಪುತ್ರರೂ, ಪೌರರೂ ಆಗಿದ್ದೇವೆ. ಈ ದೇಶದ ಆಗು

ಭೋಗ, ಕಷ್ಟ ನಷ್ಟ, ಪರಿಮಿತಗಳಲ್ಲಿ ತಮ್ಮೆಲ್ಲರಿಗಿರುವ ಪಾಲೇ ನಮಗೂ ಇದೆ.

ಇದನ್ನಿಂದು ಪೋಲೀಸಿನವರು ಅರ್ಥಮಾಡಿಕೊಂಡಿದ್ದಾರೆಯೇ ?
ದೇಶದ ನಾಯಕರು ಅರ್ಥಮಾಡಿಕೊಂಡಿದ್ದಾರೆಯೇ ?
ಜನ ಅರ್ಥಮಾಡಿಕೊಂಡಿದ್ದಾರೆಯೇ ?

ಬ್ರಿಟಿಷರಿಂದ ಕಲಿತ ದುರಾಚಾರಗಳನ್ನು, ಜನರನ್ನು ಪಶುಗಳಂತೆ ಕಾಣುವ ಮನೋಭಾವವನ್ನು ಪೋಲೀಸಿನವರು ತ್ಯಜಿಸಿದ್ದಾರೆಯೇ ? ಲಂಚ, ರುಷಪತ್ತು, ದುರ್ಬಲರ ಪೀಡನೆ, ದುಷ್ಟರಕ್ಷಣೆ, ಇಂದಿಗೂ ಪೋಲೀಸಿನವರ ಹವ್ಯಾಸಗಳಾಗಿಲ್ಲವೆ ?

ರಾಷ್ಟ್ರದ ರಕ್ಷಣೆಯ ಭಾರ ಹೊತ್ತಿರುವ ಪೋಲೀಸಿನವರು ಆತ್ಮ ಶುದ್ಧರಾಗ, ನಾಗರಿಕರಂತೆ ವರ್ತಿಸಬೇಕಾದುದು ಅಗತ್ಯವಲ್ಲವೇ ? ಲಂಡನ್ನಿನ ಪೋಲೀಸಿನವನು ಪ್ರಜರ ಪ್ರೀತ್ಯಾದರಗಳಿಗೆ ಪಾತ್ರನಾದ ವ್ಯಕ್ತಿ ; ಭಾರತದ ಪೋಲೀಸಿನವನು ಪ್ರಜರ ದ್ವೇಷ–ಉಪೇಕ್ಷೆಗಳಿಗೆ ಪಾತ್ರನಾದ ವ್ಯಕ್ತಿ.

ದೋಷ ಪೋಲೀಸಿನವರು, ಪ್ರಜರು ಇಬ್ಬರಲ್ಲಿಯೂ ಇದೆ ಎಂದು ನನ್ನ ಅಭಿಪ್ರಾಯ. ಇದೊಂದು ವಿಷವ್ಯೂಹ. ಪ್ರಜರು ಲಂಚ ಕೊಡ ದಿದ್ದರೆ ಪೋಲೀಸಿನವನು ಸ್ವೀಕರಿಸುವುದಿಲ್ಲ; ಅವನು ಲಂಚಬಡಕನಾಗಿರ ದಿದ್ದರೆ ಅವನಿಗೆ ಲಂಚಕೊಡುವುದಕ್ಕೆ ಯಾರೂ ಹೋಗುವುದಿಲ್ಲ. ಈ ಪರಿಸ್ಥಿತಿ. ಸುಧಾರಿಸಬೇಕಾದರೆ ಉಭಯರ ಸಂಸ್ಕೃತಿಯ ಮಟ್ಟ, ಜೀವನದ ಧ್ಯೇಯ ಉದಾತ್ತವಾಗಬೇಕು.

ಪೋಲೀಸಿನವರ ನೈತಿಕಬಲವನ್ನು ಕುಗ್ಗಿಸುವ ಮತ್ತೊಂದು ವಿಷಯವನ್ನು ತಮ್ಮ ಮುಂದೆ ಅರಿಕೆಮಾಡುತ್ತೇನೆ. ಪ್ರಜಾರಾಜ್ಯ ಸ್ಥಾಪನೆಯಾದ ಮೇಲೆ ಅಧಿಕಾರ ಪ್ರಜಾಮುಖಂಡರ ಕೈಗೆ ಹೋಯಿತು. ಈಗಿನ ಪ್ರಜಾಮುಖಂಡರು, ಆ ಜವಾಬ್ದಾರಿ ಸ್ಥಾನಕ್ಕೆ ಅರ್ಹರಾಗಿ ದ್ದಾರೆಯೇ ? ತಾವು ಪ್ರತಿನಿಧಿಸುತ್ತಿರುವ ಸಂಸ್ಥೆಯ ಹೆಸರನ್ನು ದುರುಪ ಯೋಗಪಡಿಸಿಕೊಂಡು ಎಷ್ಟು ಜನ ಪಾಳೆಯಗಾರರಾಗಿ ಬಾಳುತ್ತಿಲ್ಲ. ಇವರ ಸರ್ವಾಧಿಕಾರದಲ್ಲಿ ಪ್ರಜರಿಗೆ ಅಧಿಕಾರಿಗಳಿಗೆ ಉಳಿಗಾಲವಿದೆಯೇ ? ಪ್ರಜಾಮುಖಂಡರ ದುರ್ವರ್ತನೆಗಳಿಗೆ ಸಹಕಾರ ನೀಡುವ ಅಧಿಕಾರಿ ಬದುಕಬಲ್ಲ. ಈ ಪಾಳೆಯಗಾರರನ್ನು ಎದುರಿಸುವ ಅಧಿಕಾರಿ ಜೀವಂತ ನಾಗಿರಲು ಸಾಧ್ಯವೇ ? ಮುಖಂಡರು ತಮ್ಮ ರಾಜಕೀಯ ಪ್ರಭಾವದಿಂದ

ಅಧಿಕಾರವರ್ಗವನ್ನು ಆಳುತ್ತಿರುವ ನೀತಿ ಬದಲಾದಲ್ಲದೆ ದೇಶಕ್ಕೆ ರಕ್ಷಣೆ ಯಿಲ್ಲ-ಕ್ಷೇಮವಿಲ್ಲ, ಮುಖಂಡರು ನಡೆಸುತ್ತಿರುವ ಕಾಳಸಂತೆ ವ್ಯಾಪಾರ, ಮೋಸ, ವ್ಯಭಿಚಾರ, ದ್ಯೂತ ; ಮಾದಕ ಪದಾರ್ಥಗಳ ಕಳ್ಳಸಾಗಾಣಿಕೆ, ಆಹಾರ ಪದಾರ್ಥಗಳು, ಬಟ್ಟೆಯ ಕಳ್ಳ ದಾಸ್ತಾನು ಇವುಗಳನ್ನು ಯಾರು ಎದುರಿಸಲು ಶಕ್ಯ ? ಹಳ್ಳಿಹಳ್ಳಿಗಳಲ್ಲಿಯೂ ಇಂಥ ನಾಯಿಕೊಡೆಗಳು ಎದ್ದು ನಿಂತು ನಮ್ಮ ಸಾಮಾಜಿಕ, ರಾಷ್ಟ್ರಿಕ ಜೀವನವನ್ನು ಕಲುಷಿತ ಮಾಡುತ್ತಿವೆ. ಇಂಥ ಸಮಾಜವಿದ್ರೋಹಿಗಳನ್ನು ಶಾಸನಮಾಡಲೆತ್ನಿಸುವ ಅಧಿಕಾರಿಗಳು ರಾಜಕೀಯ 'ಜಗನ್ನಾಥ ರಥಚಕ್ರ'ದ ಕೆಳಗೆ ಸಿಕ್ಕು ನುಚ್ಚು ನೂರಾಗುತ್ತಿದ್ದಾರೆ.

ಇದು ಅಧಿಕಾರವರ್ಗದವರ ಸಮಸ್ಯೆಯಲ್ಲ. ಜನತೆಯ ಸಮಸ್ಯೆ. ಜನ ಜಾಗೃತರಾಗಿ ಈ ರಾಕ್ಷಸ ಶಕ್ತಿಗಳ ದಮನಮಾಡಬೇಕು. ಇಲ್ಲ ವಾದರೆ ನಾಳೆ ಮಹಾಕಾಳಿಯ ಅವತಾರವಾಗಿ ಮಹಾಪ್ರಳಯವಾದೀತು.

ನನ್ನನ್ನು ತಾವು ಪ್ರೀತ್ಯಾದರಗಳಿಂದ ಗೌರವಿಸಿದ್ದೀರಿ. ಅದಕ್ಕೆ ಪ್ರತಿಯಾಗಿ ನಾನು ಈ ಎಚ್ಚರಿಕೆ ಮಾತನ್ನು ತಮ್ಮ ಮುಂದೆ ಆಡುತ್ತಿ ದ್ದೇನೆ. ವ್ಯಾಧಿ ಉಲ್ಬಣಿಸಿ, ನಮ್ಮ ಕೈಮೀರುವ ಮುನ್ನವೇ ನಾವು ಜಾಗೃತರಾಗುವುದು ಒಳ್ಳೆಯದು"

ಎಂದು ಹೇಳಿ ಕುಳಿತ.

ಸಭೆಯಲ್ಲಿದ್ದ ಮಾನ್ಯ ಮಂತ್ರಿಗಳೆದ್ದು ಬಂದು, ವ್ಯೈಲಾರಯ್ಯನಿಗೆ ಹಸ್ತಲಾಘವವಿತ್ತು,

"It is a noble speech" ಎಂದರು.

ರಾಷ್ಟ್ರಗೀತೆಯೊಂದಿಗೆ ಸಭೆ ಮುಕ್ತಾಯವಾಯಿತು.

## ೨೫

ದಿಲ್ಲಿಯ ಕೆಲಸ ಮುಗಿದಿತ್ತು ; ಮೈಲಾರಯ್ಯ ಜಾನಕಮ್ಮ ಪ್ರೇಕ್ಷಣೀಯ ನೋಟಗಳನ್ನು ನೋಡಿಕೊಂಡು ಕಾಶಿಗೆ ಪ್ರಯಾಣ ಬೆಳೆಸಿದರು

ಗಂಗಾಸ್ನಾನ, ವಿಶ್ವೇಶ್ವರ ವಿಶಾಲಾಕ್ಷಿಯರ ದರ್ಶನದಿಂದ ದಂಪತಿಗಳು ಪುನೀತರಾದರು.

ಕಾಶಿಯನ್ನು ನೋಡಿಕೊಂಡು ಅವರು ಹರಿದ್ವಾರಕ್ಕೆ ಪ್ರಯಾಣ ಬೆಳೆಸುವ ವೇಳೆಗೆ ಎರಡು ವಾರಗಳು ಕಳೆದುಹೋಗಿದ್ದವು.

"ರಜಾ ಸಾಲದಾಗತ್ತೋ ಏನೋ ಜಾನಕಿ-ಇನ್ನೂ ಒಂದು ವಾರ, ಹತ್ತು ದಿವಸ ರಜಕ್ಕೆ ಬರೆದುಕೊಳ್ಳಬೇಕಾಗುತ್ತದೆ."

"ಈಗಲೇ ಬರೆದು ಹಾಕಿ. ಇಷ್ಟುದೂರ ಬಂದಿದ್ದೇವೆ. ಎಲ್ಲಾ ಪುಣ್ಯ ಕ್ಷೇತ್ರಗಳನ್ನೂ ನೋಡಿಕೊಂಡು ಹೋಗೋಣ"

ಎಂದು ಜಾನಕಿ ಅಭಿಪ್ರಾಯಪಟ್ಟಳು.

ಮಗಳ ಮನೆಯಲ್ಲೇ ಇದ್ದ ಅಂಬಮ್ಮನವರು ಮೊಮ್ಮಗಳ ಆಟಪಾಟಗಳಲ್ಲಿ ಮೈಮರೆತಿದ್ದರು.

ಅವರನ್ನು ಎಚ್ಚರಿಸಲೋಸುಗವೆಂಬಂತೆ ಒಂದು ದಿನ ಸೋಲೂರಿನಿಂದ ಒಂದು ತಾರು ಬಂದಿತು.

"ತಂದೆಯವರ ಆರೋಗ್ಯ ಚೆನ್ನಾಗಿಲ್ಲ-ಕೂಡಲೇ ಬಾ

-ರಂಗಣ್ಣ."

ಮಗನ ತಾರು ಕಂಡಕೂಡಲೆ ಅಂಬಮ್ಮ ಭೂಮಿಗಿಳಿದು ಹೋದರು.

"ನಾನೂ ಬರುತ್ತೇನೆ ನಡೆಯಮ್ಮ-ನಿನ್ನ ಜತೆಯಲ್ಲಿ!"

"ಎಳೆ ಮಗೂನ ಕಟ್ಟಿಕೊಂಡು ನೀನೇಕೆ ಬರಬೇಕೆ ಸುಭದ್ರಾ-ಅಳೀಮಯ್ಯ ನನ್ನ ಬಸ್ಸಿನಲ್ಲಿ ಕೂಡಿಸಿಬಿಡಲಿ-ನಾನು ಹೋಗುತ್ತೇನೆ" ಎಂದರು.

ಅಂದೇ ಶಾಮು, ಅತ್ತೆಯನ್ನು ಕರೆದುಕೊಂಡು ಹೋಗಿ ಸೋಲೂರಿನಲ್ಲಿ ಬಿಟ್ಟು ಬಂದ.

" ಅಣ್ಣನಿಗೆ ಹೇಗಿದೆ-ಏನಾಗಿದೆಯಂತೆ !"

ಎಂದು ಸುಭದ್ರಾ ಆತ್ಯಾತುರದಿಂದ ಕೇಳಿದಳು.

" ಶೀತ ಜ್ವರ ಬರುತ್ತಾ ಇದೆ. ಅಷ್ಟಕ್ಕೇ ಗಾಬರಿಪಟ್ಟುಕೊಂಡು ರಂಗಣ್ಣ ವೈರ್ ಮಾಡಿದ."

" ಯಾರು ಔಷಧ ಕೊಡುತ್ತಿದ್ದಾರೆ."

" ಡಾ. ಪಾರ್ಥಸಾರಥಿಯವರು."

" ದೇವರ ದಯದಿಂದ ಅಣ್ಣನಿಗೆ ಹುಷಾರಾದರೆ ಸಾಕು."

" ಜೀವಕ್ಕೆ ಏನೂ ಭಯವಿಲ್ಲ ಎಂದು ಡಾಕ್ಟರು ಹೇಳಿದರು "

" ಡಾಕ್ಟರು ಹೇಳುವುದೇ ಹಾಗೆ ?"

" ಡಾಕ್ಟರಿಗೆ ತಿಳಿಯದಿರುವುದು ನಿನಗೆ ಮಹಾ ತಿಳಿಯುತ್ತೇನೋ ?"

" ಮಾತುಮಾತಿಗೆ ಏಕೆ ಸಿಟ್ಟುಮಾಡಿಕೊಳ್ಳುತ್ತೀರಂದ್ರೆ "

ಎಂದು ಸುಭದ್ರಾ ಅಳಲುಪಕ್ರಮಿಸಿದಳು.

ಶಾಮ ಬೇಸರಪಟ್ಟುಕೊಂಡು ಮನೆಬಿಟ್ಟು ಹೊರಗೆ ಹೊರಟುಬಿಟ್ಟ

ಡಾಕ್ಟರ ಸತತ ಪ್ರಯತ್ನದಿಂದ ವೆಂಕಣ್ಣನವರಿಗೆ ಗುಣವಾಗುತ್ತ ಬಂದಿತು. ರಂಗಣ್ಣನ ಕಾಗದ ಸುಭದ್ರೆಯ ಮನಸ್ಸಿಗೆ ಶಾಂತಿಯನ್ನಿತ್ತಿತು.

ಹದಿನೈದು ದಿವಸಗಳು ಕಳೆದವು. ರಂಗಣ್ಣನಿಂದ ಇನ್ನೊಂದು ಪತ್ರ ಬಂದಿತು.

" ಅಣ್ಣ ಚೇತರಿಸಿಕೊಂಡು ಮೇಲಕ್ಕೇಳುವುದರೊಳಗಾಗಿ ಅಮ್ಮ ಮಲಗಿಬಿಟ್ಟಿದ್ದಾಳೆ. ನೀನೂ ಭಾವ ಕೂಡಲೆ ಇಲ್ಲಿಗೆ ಹೊರಟುಬರಬೇಕು ನೀನೇ ಬಂದು ಅಮ್ಮನ ಯೋಗಕ್ಷೇಮ ನೋಡಿಕೊಳ್ಳಬೇಕು "

ಸುಭದ್ರೆಯ ಉಸಿರೇ ಕಟ್ಟಿಹೋಯಿತು.

" ದುರ್ವಿಧಿ ಏಕೆ ನಮ್ಮನ್ನು ಹೀಗೆ ಕಾಡುತ್ತಿದೆ. ಅಮ್ಮ ಅಪ್ಪ ಮಾಡಿದ ಅಪರಾಧವೇನು ?"

ಎಂದು ಒಂದೇ ಸಮನಾಗಿ ಹಲುಬಿದಳು.

ಶಾಮ ಶಾಲೆಗೆ ರಜಾ ತೆಗೆದುಕೊಂಡು ಹೆಂಡತಿ, ಮಗಳೊಂದಿಗೆ ಸೋಲೂರಿಗೆ ಹೊರಟುಬಿಟ್ಟ.

ಕಾಹಿಲೆ ವಾಸಿಯಾಗಿದ್ದರೂ ವೆಂಕಣ್ಣನವರು ಹಾಸಿಗೆ ಬಿಟ್ಟು ಏಳುತ್ತಿರಲಿಲ್ಲ. ವಿಷಮ ಶೀತ ಜ್ವರ ಅವರನ್ನು ತೀರಾ ದುರ್ಬಲರನ್ನಾಗಿ ಮಾಡಿತ್ತು.

ಅಂಬಮ್ಮ ಮೈಮೇಲೆ ಜ್ಞಾನವಿಲ್ಲದೆ ಮಲಗಿದ್ದರು.

ಅಕ್ಕನ ಮುಖ ಕಂಡಕೂಡಲೆ ಧಾವಿಸಿ ಬಂದ ರಂಗಣ್ಣ,

“ಸದ್ಯ ನೀನು ಬಂದೆಯಲ್ಲಮ್ಮ–ಈಗ ನನಗೆ ಜೀವ ಬಂದಿತು.”

“ಡಾಕ್ಟರು ಏನು ಹೇಳಿದರು ರಂಗಣ್ಣ.”

“ವಿಷಮಶೀತ ಜ್ವರ ಸೋಂಕು ರೋಗವಂತೆ. ಅಮ್ಮ ಅಣ್ಣನ ಉಪಚಾರ ಮಾಡುತ್ತಿದ್ದಳು. ಅವಳಿಗೆ ಸೋಂಕು ತಗಲಿ ಜ್ವರ ಬರಲಾರಂಭಿಸಿದೆ.”

ಸುಭದ್ರಾ ಸೊಂಟಕ್ಕೆ ಸೆರಗು ಬಿಗಿದು ತಾಯಿತಂದೆಗಳ ಉಪಚಾರಕ್ಕೆ ನಿಂತಳು.

ಮೂರು ದಿನ ಸೋಲೂರಿನಲ್ಲಿದ್ದು ಹೊರಡಲನುವಾದ ಶಾಮು,

“ನನ್ನ ರಜಾ ಮುಗಿದಿದೆ ಸುಭದ್ರಾ–ಊರಿಗೆ ಹೋಗುತ್ತೇನೆ. ನಿಮ್ಮ ತಾಯಿಯವರ ಸ್ಥಿತಿ ಹದಗೆಟ್ಟರೆ ನನಗೆ ವೈರ್ ಮಾಡಿಸು–ಕೂಡಲೇ ಬಂದು ಬಿಡುತ್ತೇನೆ.”

“ಜಾನಕಮ್ಮನವರು ಈಗ ಇದ್ದಿದ್ದರೆ ನನಗೆಷ್ಟೋ ಧೈರ್ಯವಾಗುತ್ತಿತ್ತು.”

“ಅಣ್ಣ ಎಲ್ಲಿದ್ದಾನೋ ಗೊತ್ತಿಲ್ಲ.”

“ಆಫೀಸಿನಲ್ಲಿ ವಿಚಾರಿಸಿ ನೋಡಿ–ಅವರಿಗೆ ವಿಳಾಸ ತಿಳಿದಿದ್ದರೆ ವೈರ್ ಮಾಡಿ–”

“ಪ್ರಯತ್ನಿಸಿ ನೋಡುತ್ತೇನೆ”

ಎಂದು ಹೇಳಿದ.

ಕ್ಷಣದಂತೆ ದಿನಗಳುರುಳಿದವು.

ಒಂದುವಾರ ಕಳೆಯಿತು.

ಆಗ್ರಾಕ್ಕೆ ಬಂದಿದ್ದ ಮೈಲಾರಯ್ಯ, ಜಾನಕಮ್ಮ ಅಲ್ಲಿ ಎರಡು ದಿನವಿದ್ದು, ಬೆಳದಿಂಗಳಿನಲ್ಲಿ ‘ತಾಜ್‌ಮಹಲ್’ನ ಭವ್ಯವೈಭವ ಕಂಡು, ಮಾರನೆಯ ದಿನ ರೈಲು ಹತ್ತಿದರು.

ನಲವತ್ತೆಂಟು ಗಂಟೆಗಳ ತರುವಾಯ ರೈಲು ಮದರಾಸ್ ಸೇರಿತು.

ಮದರಾಸಿನಲ್ಲಿಳಿದ ದಂಪತಿಗಳು, ಸಮೀಪದಲ್ಲಿದ್ದ ಒಂದು ಹೊಟೇಲಿಗೆ ಹೋಗಿ, ಸ್ನಾನ, ಊಟ ಮುಗಿಸಿಕೊಂಡು ಬಂದು ಬೆಂಗಳೂರು ಗಾಡಿ ಹತ್ತಿದರು.

ಮೈಲಾರಯ್ಯ ಹೆಂಡತಿಗಾಗಿ ಒಂದು ‘ಇಲ್ಲಸ್ಟ್ರೇಟೆಡ್ ವೀಕ್ಲಿ’ (Illustrated Weekly) ತನಗಾಗಿ ಒಂದು ‘ಹಿಂದೂ’ ಪತ್ರಿಕೆ ಕೊಂಡು ತಂದ.

ರೈಲು ಹೊರಟಮೇಲೆ ಇಬ್ಬರೂ ಒಂದೊಂದು ಪತ್ರಿಕೆ ಹಿಡಿದು ಕುಳಿತರು.

'ಹಿಂದೂ' ಓದುತ್ತಿದ್ದ ಮೈಲಾರಯ್ಯ ಪರಮ ಸಂತೋಷದಿಂದ,

"ಇಲ್ಲಿ ನೋಡು ಜಾನಕಿ" ಎಂದ.

ಆವನು ತೋರಿಸಿದ 'ಮೈಸೂರು ಆಫಿಷಿಯಲ್' (Mysore Official) ಸುದ್ದಿಯ ಮೇಲೆ ಕಣ್ಣು ಹಾಯಿಸಿ ಜಾನಕಿ ಓದಿದಳು:

"ಬೆಂಗಳೂರು ಎ. ಎಸ್. ಪಿ ಆಗಿರುವ ಶ್ರೀ ಸುಬ್ಬರಾಯಪ್ಪನವರಿಗೆ ಐ. ಎ. ಎಸ್ ರ್ಯಾಂಕ್ ಕೊಡಲಾಗಿದೆ.

ಮೈಸೂರು ಡಿ. ಎಸ್. ಪಿ ಆಗಿರುವ ಶ್ರೀ ಜಯರಾಜರಿಗೆ ನಿವೃತ್ತಿಯ ಮುನ್ನ ಮೂರು ತಿಂಗಳು ರಜಾ ಕೊಡಲಾಗಿದೆ.

ಶ್ರೀ ಸುಬ್ಬರಾಯಪ್ಪನವರು ಮೈಸೂರು ಡಿ. ಎಸ್. ಪಿ ಅಧಿಕಾರ ವಹಿಸಿ ಕೊಳ್ಳತಕ್ಕದ್ದು.

ಸೋಲೂರಿನ ಇನ್ಸ್‌ಪೆಕ್ಟರಾಗಿರುವ ಶ್ರೀ ಮೈಲಾರಯ್ಯನವರಿಗೆ ಬಡ್ತಿಕೊಟ್ಟು ಶಿವಮೊಗ್ಗೆಯ ಎ. ಎಸ್. ಪಿ ಯಾಗಿ ನಿಯಾಮಕ ಮಾಡಲಾಗಿದೆ."

ಜಾನಕಿಯ ಆನಂದಕ್ಕೆ ಪಾರವೇ ಇಲ್ಲವಾಯಿತು.

"ನಿಮ್ಮ ಯಾತ್ರೆ ನಿಷ್ಫಲವಾಗಲಿಲ್ಲ. ದೇವರು ದೊಡ್ಡವನು ಕಣ್ರಿ" ಎಂದಳು.

## ೧೬

ಸಂಜೆ ಬೆಂಗಳೂರು ತಲುಪಿದ ಮೈಲಾರಯ್ಯ, ಜಾನಕಮ್ಮ ಒಂದು ಟ್ಯಾಕ್ಸಿ ಮಾಡಿಕೊಂಡು ಶಾಮನ ಮನೆಗೆ ಬಂದರು.

ಮನೆಗೆ ಬೀಗಮುದ್ರೆ ಹಾಕಲಾಗಿತ್ತು

ಅಕ್ಕಪಕ್ಕದ ಮನೆಗಳಲ್ಲಿ ವಿಚಾರಿಸಲು,

" ಸೋಲೂರಿನಿಂದ ವೈರ್ ಬಂದಿತ್ತು. ಅಲ್ಲಿಗೆ ಹೋದರು "

ಎಂದಷ್ಟೇ ತಿಳಿಯಿತು.

" ವೈರ್ ಏಕೆ ?–ನನ್ನ ಮನೂಗೆ ಮೈಯಲ್ಲಿ ಚೆನ್ನಾಗಿಲ್ಲವೇ ?–ಏನು ಆಗಿದೆಯೋ ಏನೋ ?"

ಎಂದು ಕಾತರಳಾದ ಜಾನಕಮ್ಮ,

" ಇದೇ ಟ್ಯಾಕ್ಸಿಯಲ್ಲಿ ಸೋಲೂರಿಗೆ ಹೋಗಿಬಿಡೋಣ–ನನ್ನ ಎದೆ ಬಡಿದುಕೊಳ್ಳುತ್ತಿದೆ. ಏನೋ ಅಪಘಾತ ಸಂಭವಿಸಿದೆಯೆಂದು ನನಗೆ ಕಳವಳ ವಾಗಿದೆ "

ಎಂದು ಕಣ್ಣೀರ್ಗರೆಯಲಾರಂಭಿಸಿದಳು.

ಮೈಲಾರಯ್ಯ ' ಟ್ಯಾಕ್ಸಿ ಡ್ರೈವರ್ ' ಕಡೆ ತಿರುಗಿ,

" ಸೋಲೂರಿಗೆ ಹೋಗಬೇಕು–ಬರುತ್ತೀಯೇನಯ್ಯಾ ?" ಎಂದು ಕೇಳಿದ.

" ಬರ್ತೀನಿ ಸಾಬ್."

" ಎಷ್ಟು ಕೊಡಬೇಕು."

" ಸೋಲೂರು ಇಪ್ಪತ್ತಾರು ಮೈಲಿ ಐತೆ."

" ಹೌದು."

ಡ್ರೈವರ್ ಮನಸ್ಸಿನಲ್ಲಿಯೇ ಗುಣಿಸಿಕೊಂಡು,

" ನೂರಾ ಐದು ರೂಪಾಯಿ ಕೊಡಬೇಕು ಸಾಬ್."

" ಮೈಲಿಗೆ ಎರಡು ರೂಪಾಯಿಯೇನಯ್ಯಾ ರೇಟ್."

" ನೂರು ರೂಪಾಯಿ ಕೊಟ್ಟುಬಿಡಿ ಸಾಬ್–ಬರ್ತೀನಿ."

" ನಾನು ಯಾರು ಗೊತ್ತೋ ?"

" ....... ........"

" ಸೋಲೂರ್ ಪೋಲೀಸ್ ಇನ್ಸ್‌ಪೆಕ್ಟರ್–ಇನ್ನುಮೇಲೆ ಶಿವಮೊಗ್ಗಾ ಎ. ಎಸ್.ಪಿ."

ಡೊಗ್ಗು ಸಲಾಮು ಹಾಕಿದ ಡ್ರೈವರ್,

" ನೀವು ಕೊಟ್ಟದ್ದು ಕೊಡಿ ಸಾರ್–ಬರುತ್ತೇನೆ " ಎಂದ.

ಟ್ಯಾಕ್ಸಿ ಸೋಲೂರಿನ ಅಭಿಮುಖವಾಗಲು,

" ಇಪ್ಪತ್ತಾರು – ಇಪ್ಪತ್ತಾರು – ಐವತ್ತೆರಡು – ಐ ವ ತ್ತೆ ರ ಡು ಮೈಲಿಗೆ ಐವತ್ತೆರಡು ರೂಪಾಯಿ, ಮೇಲೆ ಮೂರು ರೂಪಾಯಿ ಭಕ್ಷೀಸ್ – ಒಟ್ಟು ಐವತ್ತೈದು ರೂಪಾಯಿ ಕೊಡುವುದಕ್ಕೆ ನಾನು ಸಿದ್ಧವಾಗಿದ್ದೆ. ಡ್ರೈವರ್ ಒಪ್ಪಲಿಲ್ಲ–ನಾನು ಪೋಲೀಸ್ ಇನ್ಸ್‌ಪೆಕ್ಟರ್ ಎಂದು ತಿಳಿದ ಕೂಡಲೆ ಹೇಗೆ ದಾರಿಗೆ ಬಂದ ನೋಡು. ಇದು ನಮ್ಮ ನ್ಯಾಷನಲ್ ಕ್ಯಾರೆಕ್ಟರ್ (National Character) ನ್ಯಾಯ, ಧರ್ಮಕ್ಕೆ ಜನ ಬಾಗುವುದೇ ಇಲ್ಲ–ಅಧಿಕಾರ ; ಯಾವಾಗಲೂ ಅಧಿಕಾರ ಚಲಾಯಿಸುತ್ತ ಇರಬೇಕು "

" ಅವನಿಗೆ ನ್ಯಾಯವಾಗಿ ಕೊಡಬೇಕಾದದ್ದು ಕೊಟ್ಟುಬಿಡಿ."

" ಕೊಡುತ್ತೇನೆ–ಅವನ ಋಣ ನನಗೇಕೆ ?"

" ನನ್ನ ಬಲಗಣ್ಣಿನ ರೆಪ್ಪೆ ಒಂದೇ ಸಮನಾಗಿ ಹಾರುತ್ತಿದೆ–ಯಾವ ಅಮಂಗಳ ಸುದ್ದಿ ಕೇಳಬೇಕೋ ಏನೋ ?"

" ಇನ್ನೊಂದು ಗಂಟೆಯಲ್ಲಿ ಸೋಲೂರು ತಲಪುತ್ತೇವೆ. ಅಲ್ಲಿಯವರೆಗೆ ತಡೆದುಕೋ ಜಾನಕಿ "

ಎಂದು ಹೆಂಡತಿಯನ್ನು ಸಮಾಧಾನಗೊಳಿಸಿದ.

ಮನೆಯ ಮುಂದೆ ಟ್ಯಾಕ್ಸಿ ಬಂದು ನಿಲ್ಲಲು, ಒಳಗಿನಿಂದ ಸುಭದ್ರಾ, ರಂಗಣ್ಣ, ಶಾಮ ಹೊರಬಿದ್ದರು.

ಧಾವಿಸಿ ಬಂದ ಸುಭದ್ರಾ, ಜಾನಕಿಯನ್ನಪ್ಪಿ, ಗಟ್ಟಿಯಾಗಿ ಅಳುತ್ತಾ,

" ಆಗಬಾರದ್ದು ಆಗಿಹೋಯ್ತು ಕ್ಕಾ–ಅಮ್ಮ ಹೋಗಿಬಿಟ್ಟಳು " ಎಂದಳು.

ಜಾನಕಿಯ ಗಂಟಲು ಕಟ್ಟಿಬಂದಿತು.

ಜಾನಕಮ್ಮ ಕಣ್ಣುಗಳಿಂದಿಳಿಯುತ್ತಿದ್ದ ಧಾರೆಯನ್ನು ಲೆಕ್ಕಿಸದೆ ಸುಭದ್ರ ನಿಗೆ ಮೂಕ ಸಹಾನುಭೂತಿ ತೋರಿದಳು.

ಟ್ಯಾಕ್ಸಿಯನ್ನು ಕಳಿಸಿದ ಮೈಲಾರಯ್ಯ ಒಳಗೆ ಬಂದು,

" ಅಂಬಮ್ಮನವರಿಗೆ ಏನಾಗಿತ್ತು ?" ಎಂದು ಕೇಳಿದ.

" ಅಣ್ಣನಿಗೆ ಟೈಫಾಯಡ್ (Typhoid) ಆಯಿತು–ಅಮ್ಮ ಅವನ ಶಿಶ್ರೂಷೆ ಮಾಡುತ್ತಿದ್ದಳು. ಅಣ್ಣ ಚೇತರಿಸಿಕೊಂಡು ಮೇಲಕ್ಕೆದ್ದ–ಅಮ್ಮನಿಗೆ ಅದೇ ವ್ಯಾಧಿ ಅಂಟಿಕೊಂಡಿತು ಅವಳು ಹೆಚ್ಚು ನರಳಲೇ ಇಲ್ಲ. ಐದು ದಿವಸ ಜ್ವರ ಬಂತು–ಆರನೆಯ ದಿವಸ ' ರಾಮ–ರಾಮ ' ಎಂದು ಕಣ್ಣುಮುಚ್ಚಿಕೊಂಡಳು "

ರಂಗಣ್ಣನನ್ನು ಸಂತೈಸುತ್ತಾ ಮೈಲಾರಯ್ಯ,

" ವೆಂಕಣ್ಣನವರಿಗೆ ಈಗ ಹೇಗಿದೆ."

" ತುಂಬ ದುರ್ಬಲವಾಗಿದ್ದಾನೆ ಅಮ್ಮ ಹೋದದ್ದು ಅವನಿಗೆ ಷಾಕ್ (Shock) ಹೊಡೆದ ಹಾಗಾಗಿದೆ."

ಮೈಲಾರಯ್ಯ ಮೆಲ್ಲನೆ ವೆಂಕಣ್ಣನವರ ರೂಮಿಗೆ ಬಂದು,

" ಸ್ವಾಮಿ–ಸ್ವಾಮಿ " ಎಂದ.

ವೆಂಕಣ್ಣನವರು ತಮ್ಮ ದುರ್ಬಲನೇತ್ರಗಳನ್ನು ತೆರೆದು,

" ಯಾರು " ಎಂದರು.

" ನಾನು–ಮೈಲಾರಯ್ಯ."

ವೆಂಕಣ್ಣನವರು ಕಣ್ಣಿನಲ್ಲಿ ನೀರು ತಂದುಕೊಂಡು, ಕೈಚಾಚಿದರು. ಮೈಲಾರಯ್ಯ ಅವರ ಪಕ್ಕದಲ್ಲಿ ಕುಳಿತುಕೊಂಡು, ಕೈಹಿಡಿದುಕೊಂಡ.

" ನನ್ನ ಅಂಬಾ ಹೋಗಿಬಿಟ್ಟಳು ಮೈಲಾರಯ್ಯ–ನಮ್ಮೆಲ್ಲರನ್ನೂ ಅನಾಥರನ್ನಾಗಿ ಮಾಡಿಬಿಟ್ಟಳು–ನನ್ನ ಪ್ರಾಣ ಉಳಿಸುವುದಕ್ಕೆ ತನ್ನ ಪ್ರಾಣ ಒಪ್ಪಿಸಿದಳು."

" ದೈವೇಚ್ಛೆಗೆ ಯಾರೇನು ಮಾಡಲು ಸಾಧ್ಯ ಸ್ವಾಮಿ. ಅಂಬಮ್ಮನವರು ಮಹಾ ಪತಿವ್ರತೆ–ಗಂಡ, ಮಕ್ಕಳು, ಮೊಮ್ಮಕ್ಕಳು ಎಲ್ಲರ ಮಧ್ಯೆ ಸುಖವಾಗಿ ತಮ್ಮ ಯಾತ್ರೆ ಮುಗಿಸಿಬಿಟ್ಟರು. ನೀವು ಧೈರ್ಯ ತಂದುಕೊಳ್ಳಬೇಕು. ರಂಗಣ್ಣ ಇನ್ನೂ ಚಿಕ್ಕವನು–ಅವನಿಗೆ ಒಂದು ದಾರಿಯಾಗುವವರೆಗಾದರೂ ನೀವು...."

" ಸುಭದ್ರನ್ನ ನಿಮ್ಮ ಮಡುಲಿಗೆ ಹಾಕಿದ ಹಾಗೇ, ರಂಗಣ್ಣನನ್ನೂ ಹಾಕಿಬಿಡ್ತೀನಪ್ಪಾ–ನಾನು ಹೆಚ್ಚು ದಿನ ಬದುಕಿರುತ್ತೇನೆಂದು...."

" ಸುಮ್ಮನಿರಿ ಸ್ವಾಮಿ–ಆ ಮಾತು ಆಡಬೇಡಿ."

" ನಿಮಗೆ ಎ. ಎಸ್. ಪಿ ಕೆಲಸವಾಯಿತಂತೆ !"

" ಆಗಿದೆಯೆಂದು ನಾನೂ ಪೇಪರಿನಲ್ಲಿ ಓದಿದೆ."

" ಸಂತೋಷ–ಅಂಬಾ ಬದುಕಿದ್ದರೆ ಕುಣಿದಾಡಿಬಿಡುತ್ತಿದ್ದಳು. ನೀವು

ಕಾಶಿಯಾತ್ರೆ ಮಾಡಿಕೊಂಡು ಬರುತ್ತೀರಿ–ಅದ್ದೂರಿಯಿಂದ 'ಗಂಗಾ ಸಮಾರಾಧನೆ' ಮಾಡಬೇಕೂಂತ ಸಂಕಲ್ಪ ಮಾಡಿದ್ದಳು."

" ನಾವು ನಿರ್ಭಾಗ್ಯರು ಸ್ವಾಮಿ."

" ನೀವು ಯಾವಾಗ ಬಂದಿರಿ ?"

" ಬೆಳಿಗ್ಗೆ ಮದರಾಸಿಗೆ ಬಂದೆವು–ಕೂಡಲೆ ರೈಲು ಹತ್ತಿ ಸಂಜೆಗೆ ಬೆಂಗಳೂರಿಗೆ ಬಂದೆವು–ಮನೆಯಲ್ಲಿ ಯಾರೂ ಇರಲಿಲ್ಲ–ಅಲ್ಲಿ ನಿಲ್ಲದೆ ಕೂಡಲೆ ಹೊರಟುಬಂದೆವು."

" ಊಟ ಮಾಡಿ–ತುಂಬ ಆಯಾಸವಾಗಿರಬಹುದು."

ದುಃಖತಪ್ತನಾಗಿ ಹೊರಗೆ ಬಂದ ಮೈಲಾರಯ್ಯನನ್ನು ನೋಡಿ ಜಾನಕಮ್ಮ,

" ವೆಂಕಣ್ಣನವರಿಗೆ ಹೇಗಿದೆ " ಎಂದು ಕೇಳಿದಳು.

" ತುಂಬ ನಿಶ್ಯಕ್ತಿ–ಮಾತು ಚೆನ್ನಾಗಿ ಆಡುತ್ತಿದ್ದಾರೆ–ಆದರೆ...."

" ಆದರೆ...."

" ಇವರೂ ಹೆಚ್ಚು ಕಾಲ ಬದುಕುತ್ತಾರೆಂದು ನನಗೆ ನಂಬಿಕೆಯಿಲ್ಲ ಜಾನಕಿ."

" ಅಯ್ಯೋ–ಎಂಥ ಅನ್ಯಾಯ. ಕಷ್ಟಗಳು ಹೀಗೆ ಒಂದರ ಮೇಲೆ ಒಂದು ಬರುವುದೇ ?"

" ಕಷ್ಟಗಳು ಬರುವುದೇ ಹಾಗೆ ಜಾನಕಿ."

" ಸುಭದ್ರನ್ನ ನೋಡುವುದಕ್ಕೆ ಆಗುವುದಿಲ್ರೀ–ಮಗೂ ಭೂಮಿಗಿಳಿದು ಹೋಗಿದೆ."

" ಅವಳಿಗೆ ನೀನು ತುಂಬ ಧೈರ್ಯ ಕೊಡಬೇಕು ಜಾನಕಿ–ವೆಂಕಣ್ಣನವರ ವಿಷಯವನ್ನೂ ಸೂಕ್ಷ್ಮವಾಗಿ ತಿಳಿಸು–ಇದೇ ಮನೋರೋಗ ಹಚ್ಚಿಕೊಂಡು ಅವಳೂ ಹಾಸಿಗೆ ಹಿಡಿದು ಬಿಟ್ಟರೆ...."

" ಮುಂದೆ ಈ ಮನೆ ಗತಿಯೇನು ?"

" ಏನು ಎಂದು ಹೇಳಲಿ–ಪಾಪ, ರಂಗಣ್ಣನ ಪಾಡು ನೋಡಿದರೆ ಕರುಳು ಕಿತ್ತು ಬರುತ್ತದೆ "

ಎಂದು ಹೊರಗೆ ಬಂದು ಕುಳಿತು, ತನ್ನ ಕಣ್ಣುಗಳನ್ನೊರಸಿಕೊಂಡ.

' ವೈಕುಂಠ ಸಮಾರಾಧನೆ ' ಮುಗಿಯಿತು.

ಮೈಲಾರಯ್ಯ ಕೂಡಲೆ ಶಿವಮೊಗ್ಗೆಗೆ ಹೋಗಿ ' ಚಾರ್ಜು ' ವಹಿಸಿ ಕೊಳ್ಳಬೇಕಾಗಿತ್ತು.

ಶಾಮುನ ರಜವೂ ಮುಗಿಯುತ್ತ ಬಂದಿದ್ದುದರಿಂದ ಅವನೂ ಊರಿಗೆ ಹೋಗಬೇಕಾಗಿತ್ತು.

ಶಿವಮೊಗ್ಗೆಗೆ ಹೊರಡಲನುವಾದ ಮೈಲಾರಯ್ಯ,

"ನಾಲ್ಕು ದಿವಸ ನೀನು ಇಲ್ಲೇ ಇರು ಜಾನಕಿ, ನಾನು ಶಿವಮೊಗ್ಗೆಗೆ ಹೋಗಿ, ಮನೆ ಗೊತ್ತುಮಾಡಿಕೊಂಡು ಬಂದು ನಿನ್ನ ಕರೆದುಕೊಂಡು ಹೋಗುತ್ತೇನೆ."

"ಶಾಮುನೂ ಹೊರಟಿದ್ದಾನೆ–ಸುಭದ್ರಾ ಅವನ ಜತೆ ಹೋಗಬೇಕಾಗುತ್ತದೆ. ರಂಗಣ್ಣ ಇಲ್ಲಿ ಪೂರೈಸುವುದು ಹೇಗೆ?"

"ಮೂರು ನಾಲ್ಕು ತಿಂಗಳು ಅವನು ಕಾಲತಳ್ಳಬೇಕು. ಅಷ್ಟರಲ್ಲಿ ನಾವು ಹೆಣ್ಣು ಗೊತ್ತುಮಾಡಿ ಅವನ ಮದುವೆ ಮಾಡಿಬಿಡಬೇಕು."

"ಈ ವರ್ಷ ಮದುವೆ ಮಾಡಬಹುದೋ, ಮಾಡಬಾರದೋ?"

"ಹಿರಿಯರು ಗತಿಸಿದ ವರ್ಷ ಶ್ರೇಷ್ಠವಂತೆ!"

"ನೀವು ಶಿವಮೊಗ್ಗೆಗೆ ಹೋಗಿ ಬಂದಮೇಲೆ ನಾನೂ ಸುಭದ್ರಾ ಇಲ್ಲಿಂದ ಹೊರಡುತ್ತೇವೆ. ಶಾಮು ಬೇಕಾದರೆ ಈಗ ಹೋಗಲಿ."

"ಹಾಗೇ ಆಗಲಿ"

ಎಂದು ಮೈಲಾರಯ್ಯ ಒಪ್ಪಿಕೊಂಡ.

ಮಾರನೆಯ ದಿನ ಪ್ರಯಾಣ ಬೆಳೆಸಲು ಮೈಲಾರಯ್ಯ ವ್ಯವಸ್ಥೆ ಮಾಡುತ್ತಿದ್ದ.

ವೆಂಕಣ್ಣನವರ ಮನೆಯಿಂದ ಬಂದ ಸುದ್ದಿ ಅವನನ್ನೂ ಜಾನಕಮ್ಮನನ್ನೂ ತಲ್ಲಣಗೊಳಿಸಿತು.

ಇಬ್ಬರೂ ಧಾವಿಸಿ ವೆಂಕಣ್ಣನವರ ಮನೆಗೆ ಓಡಿಬಂದರು.

ವೆಂಕಣ್ಣನವರ ಜೀವ ತುಯ್ಯುತ್ತಿತ್ತು.

ಉಸಿರಾಡಿಸುವುದಕ್ಕೂ ಅವರು ಬಹಳ ಕಷ್ಟಪಡುತ್ತಿದ್ದರು.

ಡಾಕ್ಟರು ಒಂದಾಗುತ್ತಲೊಂದು ಇಂಜಕ್ಷನ್ ಕೊಡುತ್ತಿದ್ದರೂ ಯಾವ ಪ್ರಯೋಜನವೂ ಆಗಲಿಲ್ಲ.

ಸಂಜೆಯವರೆಗೆ ಒಂದೇ ಸಮನೆ ಜೀವ–ಸಾವಿನ ಮಧ್ಯೆ ಹೋರಾಟ ಸಾಗಿತ್ತು.

ಸಂಜೆ ಕಳೆದು, ನಸುಗತ್ತಲೆ ಕಾಲಿಟ್ಟಿತು.

ವೆಂಕಣ್ಣನವರು ಒಮ್ಮೆ ವಿಶಾಲವಾಗಿ ಕಣ್ಣು ತೆರೆದು, ಕಣ್ಣುಮುಚ್ಚಿದರು.

ಅವರ ಬಾಯಂಚಿನಿಂದ ರಕ್ತದ ಕೋಡಿ ಹರಿಯಿತು.

ಡಾಕ್ಟರು ಮತ್ತೊಮ್ಮೆ ಪರೀಕ್ಷಿಸಿ ನೋಡಿ,

" ಹೆಮರೇಜ್ ಆಫ್ ಹಾರ್ಟ್ (Hemmorage of Heart) "

ಎಂದರು

ಮೊದಲೇ ದುಃಖ ತಪ್ತನಾಗಿದ್ದ ಮನೆ ದುಃಖಸಾಗರದಲ್ಲಿ ಮುಳುಗಿತು.

ಮೈಲಾರಯ್ಯ, ಶಾಮು ಇಬ್ಬರೂ ಪ್ರಯಾಣ ನಿಲ್ಲಿಸಿದರು.

ಕರ್ಮಾಂತರಗಳು ವೈಕುಂಠ ಸಮಾರಾಧನೆ ಮುಗಿದವು.

ಮೈಲಾರಯ್ಯ ರಂಗಣ್ಣನನ್ನು ಹತ್ತಿರ ಕರೆದು ಅವನಿಗೆ ಧೈರ್ಯ ಹೇಳಿ,

" ವಿಧಿಯಿಲ್ಲ–ನಿನ್ನೊಬ್ಬನನ್ನೇ ಬಿಟ್ಟು ನಾವೆಲ್ಲರೂ ಹೋಗಬೇಕಾಗಿದೆ ರಂಗಣ್ಣ. ಯಾವ ಬಾಯಲ್ಲಿ ನಿನಗೆ ಸಮಾಧಾನ ಹೇಳಲಿ–ನೀನು ಧೈರ್ಯ ತಂದುಕೊಂಡು ಬಾಳು ಸಾಗಿಸಬೇಕು. ನಿನಗೆ ಬಿಡುವು ಸಿಕ್ಕಿದೊಡನೆಯೇ ಶಿವಮೊಗ್ಗೆಗೆ ಬಾ–ಮುಂದಿನ ವಿಷಯ ಸಾವಕಾಶವಾಗಿ ಯೋಚಿಸೋಣ."

ರಂಗಣ್ಣನಿಗೆ ದಂಗು ಬಡಿದಂತಾಗಿತ್ತು.

' ಏನು ಮಾಡಬೇಕು–ಏನು ಆಡಬೇಕು ' ಎನ್ನುವುದೇ ಅವನಿಗೆ ಹೊಳೆಯಲಿಲ್ಲ.

ಮೈಲಾರಯ್ಯನ ಕೈ ಹಿಡಿದು ಮಕ್ಕಳಂತೆ ಅಳುತ್ತಾ,

" ನನ್ನನ್ನೂ ಮಗನೆಂದು ಭಾವಿಸಿ ನೀವೂ ಜಾನಕಮ್ಮನವರೂ ಕಾಪಾಡಬೇಕು " ಎಂದ.

ಮೈಲಾರಯ್ಯ ತನ್ನ ದುಃಖ ಅಡಗಿಸಿಕೊಂಡು, ಅವನ ತಲೆ ನೇವರಿಸಿದ.

ಮಾರನೆಯ ದಿನ ಮೈಲಾರಯ್ಯ, ಜಾನಕಮ್ಮ, ಶಾಮು, ಸುಭದ್ರಾ ಬೆಂಗಳೂರಿಗೆ ಪ್ರಯಾಣ ಬೆಳಸಿದರು.

# ೨೭

ಮೈಲಾರಯ್ಯನಿಗೆ 'ದುರ್ಗಿಗುಡಿ ವಿಸ್ತರಣ'ದಲ್ಲಿ ಹೊಸದಾಗಿ ಕಟ್ಟಿದ್ದ ಒಳ್ಳೆಯ ಮನೆಯೇ ಸಿಕ್ಕಿತು.

"ನಾವು ಇರುವವರು ಇಬ್ಬರು–ಇಷ್ಟು ದೊಡ್ಡ ಮನೆಯೇಕೆ ?–ಎಪ್ಪತ್ತೈದು ರೂಪಾಯಿಗಳ ಬಾಡಿಗೆಯೂ ಹೆಚ್ಚು"

ಎಂದು ಜಾನಕಮ್ಮ ಸೂಚಿಸಲು ಮೈಲಾರಯ್ಯ,

"ಇಲ್ಲಿಯ ಸಮಾಚಾರ ನಿನಗೆ ಗೊತ್ತಿಲ್ಲ ಜಾನಕಿ. ಶಿವಮೊಗ್ಗಾ ಜಿಲ್ಲೆಯಲ್ಲಿ ಮಧ್ಯಮ ವರ್ಗವೇ ಇಲ್ಲ. ಜನ ಇಲ್ಲ ತೀರಾ ಬಡವರು–ಇಲ್ಲ ತೀರಾ ಅನುಕೂಲಸ್ಥರು. ಮನೆಗಳೂ ಹಾಗೆಯೇ ! ಸಣ್ಣ ಮನೆಗಳಲ್ಲಿ ವಾಸಿಸುವುದೇ ಸಾಧ್ಯವಿಲ್ಲ–ನಾನಂತೂ ಸ್ವಂತಕ್ಕೆ ಒಂದು ಮನೆ ಮಾಡಲಿಲ್ಲ. ಇರುವಷ್ಟು ದಿನ ಒಳ್ಳೆಯ ಬಾಡಿಗೆ ಮನೆಯಲ್ಲಿಯೇ ಇದ್ದುಬಿಡೋಣ ಎಂದು ನಿಶ್ಚಯಿಸಿದೆ" ಎಂದ.

ಸೊಗಸಾದ ಮನೆ, ಸಲ್ಲನತ್ತು, ಓಡಿಯಾಡಲು ಸರ್ಕಾರಿ ಜೀಪ್ ಎಲ್ಲ ಅನುಕೂಲ್ಯಗಳೂ ಇದ್ದವು.

ಜಾನಕಿಗೆ ಬೇಸರವಾಗದಿರಲೆಂದು ಮೈಲಾರಯ್ಯ ಒಂದು ರೇಡಿಯೋ ಕೊಂಡು ತಂದಿಟ್ಟ.

ಇನ್‌ಸ್ಪೆಕ್ಷನ್ ಪ್ರವಾಸ ಹೋಗದಿದ್ದ ವೇಳೆಗಳಲ್ಲಿ ಮೈಲಾರಯ್ಯ, ಕಛೇರಿ ಮುಗಿಸಿಕೊಂಡು ಮನೆಗೆ ಬಂದುಬಿಡುತ್ತಿದ್ದ. ಒಂದೊಂದು ದಿನ ಇಬ್ಬರೂ ವಾಕಿಂಗ್ ಹೋಗಿ ಬರುತ್ತಿದ್ದರು ; ಒಂದೊಂದು ದಿನ ಸಿನೀಮಾಕ್ಕೆ ಹೋಗಿ ಬರುತ್ತಿದ್ದರು.

ಆರು ತಿಂಗಳಲ್ಲಿ ಮೈಲಾರಯ್ಯನ ದಕ್ಷತೆ, ವ್ಯಕ್ತಿಶೀಲ, ವೃತ್ತಿಶೀಲ ಶಿವಮೊಗ್ಗೆಯ ಜನಕ್ಕೆ ಚೆನ್ನಾಗಿ ಮನದಟ್ಟಾಯಿತು. ಸ್ವಕಾರ್ಯ ದುರಂಧರರು, ಊರಿನ ಪುಢಾರಿಗಳು, ಕಾಳಸಂತೆ ವರ್ತಕರು ಅವನ ಬಳಿ ಸುಳಿಯಲು ಅಂಜುತ್ತಿದ್ದರು. 'ಮುಟ್ಟಿದರೆ ಮುನಿ'ಯಂತಾಗಿದ್ದ ಮೈಲಾರಯ್ಯ ಊರಿನವರ ಸಂಪರ್ಕವನ್ನೇ ಇಟ್ಟುಕೊಂಡಿರಲಿಲ್ಲ. ಮನೆಯ ಹತ್ತಿರ ಯಾರೂ ಬರಕೂಡ

ದೆಂದು ಕಟ್ಟುಪ್ಪಣೆ ವಿಧಿಸಿದ್ದ. ಕಛೇರಿಯ ಕೆಲಸವನ್ನು ಕಛೇರಿಯಲ್ಲೇ ಮುಗಿಸಿ ನಿರ್ಮಲಚಿತ್ತನಾಗಿ ಮನೆ ಸೇರುತ್ತಿದ್ದ.

ಒಂದು ದಿನ ಗಂಡ ಹೆಂಡತಿ ಇಬ್ಬರೂ ರೇಡಿಯೋ ಕೇಳುತ್ತ ಕುಳಿತಿದ್ದರು.

ಜಾನಕಿ ಅನ್ಯಮನಸ್ಕಳಾಗಿದ್ದುದನ್ನು ಕಂಡು ಮೈಲಾರಪ್ಪ ರೇಡಿಯೋ ನಿಲ್ಲಿಸಿ,

"ನನ್ನ ಕೆಲಸದಲ್ಲಿ ನಾನು ನಿಮಗ್ನನಾಗಿಬಿಡುತ್ತೇನೆ. ನಿನಗೆ ಹೊತ್ತು ಹೋಗುವುದಿಲ್ಲ–ಊರಿನಲ್ಲಿ ಲೇಡೀಸ್ ಕ್ಲಬ್ ಇದೆ, ಮಹಿಳಾ ಸಮಾಜ ಇದೆ. ಏಕೆ ಸೇರಬಾರದು ಜಾನಕಿ."

"ನನಗೊಂದೂ ಬೇಡ್ರೀ–ಬಿಟ್ಬಿಟ್ಟ. ಬರೆ ಪ್ರದರ್ಶನಕ್ಕಿರುವ ಸಮಾಜಗಳನ್ನು ಸೇರಿ, ಕಂಡವರನ್ನು ಹೀಯಾಳಿಸುತ್ತ ಕೂಡುವುದು ನನಗೆ ಇಷ್ಟವಿಲ್ಲ. ಪಾಪ, ರಂಗಣ್ಣ ಏನು ಮಾಡಿಕೊಂಡಿದ್ದಾನೋ ಎಂದು ಯೋಚನೆಯಾಗಿದೆ. ಸಣ್ಣ ಮಗು ಕಟ್ಟಿಕೊಂಡು ಸುಭದ್ರಾ ಹೇಗೆ ಏಗುತ್ತಿದ್ದಾಳೋ ಏನೋ ?"

"ಬೇಕಾದರೆ ಹೋಗಿ ಎಲ್ಲರನ್ನೂ ನೋಡಿಕೊಂಡು ಬಾ"

"ನಿಮ್ಮೊಬ್ಬರನ್ನೇ ಇಲ್ಲಿ ಬಿಟ್ಟು ನಾನು ಹೋಗಲೇ ?. ರಂಗಣ್ಣನಿಗೆ ಹೆಣ್ಣು ನೋಡುವುದಿಲ್ಲವೇನು ?"

"ಸ್ವಲ್ಪ ದಿನ ಕಳೆಯಲಿ ಎಂದು ಸುಮ್ಮನಿದ್ದೆ ಜಾನಕಿ. ಈಗೀಗ ಸ್ವಲ್ಪ ಬಿಡುವು ಸಿಕ್ಕುತ್ತಿದೆ. ಇನ್ನು ಅತ್ತ ಲಕ್ಷ್ಯಕೊಡುತ್ತೇನೆ."

"ಊರಿನ ಸಂಪರ್ಕ ನೀವು ಸ್ವಲ್ಪವಾದರೂ ಇಟ್ಟುಕೊಂಡಿದ್ದರೆ ಚೆನ್ನಾಗಿತ್ತು."

"ಈ ಕಾಲದಲ್ಲಿ ಅಧಿಕಾರಿಯಾದವನು ತನ್ನನ್ನೇ ತಾನು 'ಅಸ್ಪೃಶ್ಯ' ನಂತೆ ಕಂಡುಕೊಳ್ಳಬೇಕು ಜಾನಕಿ–ಊರಿನವರ ಸಂಪರ್ಕ ಬೆಳೆಸಿದರೆ ಇಲ್ಲದ್ದೆಲ್ಲದರ ಪ್ರಭಾವಕ್ಕೆ ಒಳಗಾಗಬೇಕಾಗುತ್ತದೆ."

"ವೆಂಕಣ್ಣನವರ ಮನೆ ನಿಲ್ಲಿಸುವ ಜವಾಬ್ದಾರಿ ನಿಮ್ಮದು. ಅದನ್ನು ಹೇಗೆ ಸಾಧಿಸುತ್ತೀರೋ ನೋಡಿ" ಎಂದಳು.

ಪೋಲೀಸ್ ಅಧಿಕಾರಿಯಾಗಿ ಮಾನವ ಜೀವನದ ಅನೇಕ ಮುಖಗಳನ್ನು, ಅದರ ರಾಗದ್ವೇಷಗಳನ್ನು–ಸ್ವಾರ್ಥ ದುರಾಶೆಗಳನ್ನು ಕಂಡಿದ್ದ ಮೈಲಾರಪ್ಪನ ಮನಸ್ಸು ಕ್ರಮಕ್ರಮೇಣ ಅಧ್ಯಾತ್ಮದ ಕಡೆ ತಿರುಗುತ್ತಿತ್ತು.

ಅಂಬಮ್ಮನವರ ಸಾವು–ಅದರ ಹಿಂಬದಿಯಲ್ಲಿಯೇ ಬಂದ ವೆಂಕಣ್ಣನವರ ಸಾವು ಅನೇಕ ನಂಬಿಕೆಗಳಿಗೆ ಸವಾಲು ಹಾಕಿದ್ದವು.

'ಜೀವನ ಎಷ್ಟು ವಿಸ್ತಾರ–ಜೀವಿ ಎಷ್ಟು ಸಣ್ಣವನು !

"ಸಹಸ್ರಾರು ಸಮಸ್ಯೆಗಳಿಂದ ತುಂಬಿರುವ ಈ ಲೋಕಕ್ಕೆ ಬರುವ ಜೀವಿಯ ಭವಿಷ್ಯವೇನು ?

'ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದು ಹೇಗೆ–ಅವುಗಳಿಂದ ಪಾರಾಗುವುದು ಹೇಗೆ ?"

ಎಂಬ ಪ್ರಶ್ನೆಗಳು ಅವನನ್ನು ಸತತವಾಗಿ ಕಾಡಲಾರಂಭಿಸಿದವು.

ಒಂದು ದಿನ ಆಫೀಸ್ ಕೆಲಸ ಮುಗಿಸಿದ ವೈಲಾರಯ್ಯ, ಕಾರಕೂನ ವೆಂಕಟಸುಬ್ಬಯ್ಯನನ್ನು ಕರೆದು,

"ಕೆಲಸ ಮುಗಿಯಿತೇನ್ರೀ ?" ಎಂದು ಕೇಳಿದ.

"ಇನ್ನೂ ಇಲ್ಲ ಸ್ವಾಮಿ–"

"ನೀವು ಮನೆಗೆ ಹೋಗುವುದು ಯಾವ ಕಾಲಕ್ಕೆ ?"

"ಏಳು–ಎಂಟು ಗಂಟೆಯಾಗಬಹುದು."

"ಐದರ ಮೇಲೆ ದುಡಿದದ್ದಕ್ಕೆ ಸರ್ಕಾರ ನಿಮಗೆ ಓವರ್‌ಟೈಮ್ ಅಲೋಯನ್ಸ್ (Overtime allowance) ಕೊಡುತ್ತದೇನ್ರೀ ?"

"ಇಲ್ಲ ಸ್ವಾಮಿ."

"ಐದಕ್ಕೆ ಎಲ್ಲಾ ಕೆಲಸ ಮುಗಿಸಿ ಮನೆಗೆ ಹೋಗಿ, ಹೆಂಡತಿ ಮಕ್ಕಳ ಪಾಡು ಏನು ಎಂದು ನೋಡಿಕೊಳ್ಳಿ. ಅಲ್ಪ ಸ್ವಲ್ಪ ಕೆಲಸ ಇದ್ದರೆ ನಾಳೆ ಬಂದು ನೋಡಿಕೊಳ್ಳುವಿರಂತೆ !"

"ಎಂಟು ಗಂಟೆಗೆ ನಾವು ಆಫೀಸ್ ಬಿಟ್ಟು ಹೊರಟರೂ ಹಿಂದಿದ್ದ ಸಾಹೇಬರು ಕೋಪಮಾಡಿಕೊಳ್ಳುತ್ತಿದ್ದರು."

"ಕಾಲ ಬದಲಾಯಿಸುತ್ತಿದೆ ವೆಂಕಟಸುಬ್ಬಯ್ಯ. ನಾವು ಒಬ್ಬರನ್ನೊಬ್ಬರು ಮನುಷ್ಯರಂತೆ ಕಾಣುವುದನ್ನು ಅಭ್ಯಾಸಮಾಡಿಕೊಳ್ಳಬೇಕು."

"ನನಗೆ ನಿಮ್ಮಿಂದ ಒಂದು ಉಪಕಾರವಾಗಬೇಕಲ್ಲಾ ವೆಂಕಟಸುಬ್ಬಯ್ಯ."

"ಅಷ್ಟು ದೊಡ್ಡ ಮಾತೇಕೆ ಸ್ವಾಮಿ–ಅಪ್ಪಣೆಯಾದರೆ ಶಿರಸಾವಹಿಸಿ ಮಾಡುತ್ತೇನೆ."

"ಯಾವದೋ ಧರ್ಮ ಕರ್ಮ ಸಂಯೋಗದಿಂದ ನಾನೂ ಹಿಂದುವಾಗಿ ಹುಟ್ಟಿದೆ. ಕಾಲೇಜು ಬಿಟ್ಟು ಬಂದವನೇ ಕೆಲಸಕ್ಕೆ ಸೇರಿದೆ–ನನ್ನ ಧರ್ಮದ ಸ್ವರೂಪ ತಿಳಿಯುವುದಕ್ಕೇ ನನಗೆ ಅವಕಾಶವಾಗಲಿಲ್ಲ. ಈವರೆಗೆ ನನ್ನ ಜೀವನವೆಲ್ಲಾ ದುಡಿಯುವುದು–ಹೊಟ್ಟೆ ತುಂಬಿಕೊಳ್ಳುವುದು ಎರಡರಲ್ಲಿಯೇ ಮುಗಿದಿದೆ. ಇನ್ನಾದರೂ ಜೀವನ ಸಾರ್ಥಕ್ಯಪಡಿಸಿಕೊಳ್ಳುವ ಮಾರ್ಗ ಹುಡುಕಬೇಕಾಗಿದೆ–

ನಿಮ್ಮ ಗುರುತಿನವರು ಯಾರಾದರೂ ಪಂಡಿತರಿದ್ದರೆ ಹೇಳಿ. ದಿನಕ್ಕೆ ಒಂದೆ ರಡು ಗಂಟೆ ಗೀತಾಶ್ರವಣ ಉಪನಿಷತ್ ಪ್ರವಚನ ನಡೆಸಲಿ–ಶಕ್ತ್ಯಾನುಸಾರ ಅವರಿಗೆ ಸಂಭಾವನೆ ಕೊಡುತ್ತೇನೆ."

"ಹೈಸ್ಕೂಲಿನ ನಿವೃತ್ತ ಪಂಡಿತರು ಒಬ್ಬರಿದ್ದಾರೆ ಸ್ವಾಮಿ–ನರಹರಿ ಶಾಸ್ತ್ರಿಗಳೊಂತ–ಮನುಷ್ಯ ತುಂಬಿದ ಕೊಡ. ನಿಗರ್ವಿ–ತಮ್ಮಂಥವರು ಗೀತಾ ಭ್ಯಾಸ ಮಾಡುತ್ತೇನೆಂದರೆ ಶಾಸ್ತ್ರಿಗಳು ಸಂತೋಷದಿಂದ ಬಂದು ಪಾಠ ಹೇಳು ತ್ತಾರೆ."

"ನಾಳೆ ಅವರನ್ನು ಕರೆದುಕೊಂಡು ಬರುತ್ತೀರಾ ?"

"ಬೆಳಿಗ್ಗೆ ತಮಗೆ ಅನುಕೂಲವೇ ?"

"ಮನೆಯಲ್ಲೇ ಇರುತ್ತೇನೆ–ಕರೆದುಕೊಂಡು ಬನ್ನಿ" ಎಂದ.

ಬೆಳಿಗ್ಗೆ ಸುಮಾರು ಒಂಭತ್ತು ಗಂಟೆಯ ವೇಳೆಗೆ ವೆಂಕಟಸುಬ್ಬಯ್ಯ ನೊಂದಿಗೆ ಬಂದ ನರಹರಿಶಾಸ್ತ್ರಿಗಳನ್ನು ಗೌರವದಿಂದ ಸ್ವಾಗತಿಸಿ ಮೈಲಾರಯ್ಯ,

"ನಾನು ನಿರಕ್ಷರಕುಕ್ಷಿ ಶಾಸ್ತ್ರಿಗಳೇ–ಸಂಸ್ಕೃತ ಓದುವುದಕ್ಕೂ ಬರದು–ಬರೆಯುವುದಕ್ಕೂ ಬರದು ಈ ಅಜ್ಞಾನಿಗೆ ನೀವು ದಾರಿ ತೋರಿಸಬೇಕು."

"ಆಧ್ಯಾತ್ಮ ಪ್ರವೃತ್ತಿ ನಿಮ್ಮಲ್ಲಿ ಹುಟ್ಟಿದಾಗಲೇ ಅಜ್ಞಾನ ಪರಿಹಾರ ವಾಯಿತು ಮೈಲಾರಯ್ಯನವರೇ. ಭಗವದ್ಗೀತೆಯಿಂದಲೇ ಆರಂಭಿಸೋಣ–ನಾನು ಶ್ಲೋಕಗಳನ್ನು ಓದಿ ಅರ್ಥ ವಿವರಿಸುತ್ತೇನೆ ಕನ್ನಡ ಲಿಪಿಯಲ್ಲಿ ಅಚ್ಚಾಗಿರುವ ಗೀತಾಗ್ರಂಥ ನಿಮ್ಮಲ್ಲಿದೆಯೇ ?"

"ಇಲ್ಲವಲ್ಲಾ !"

"ಚಿಂತೆಯಿಲ್ಲ–ನಾಳೆ ನಾನೊಂದು ಪ್ರತಿ ತಂದುಕೊಳ್ಳುತ್ತೇನೆ. ನಿಮಗೆ ಸಂಸ್ಕೃತ ಭಾಷೆ ಕಲಿಯುವ ಇಚ್ಛೆಯಿದ್ದರೆ ಅದನ್ನೂ ಕಲಿಸುತ್ತೇನೆ. ಗೀತಾ ವ್ಯಾಸಂಗ ಮುಗಿದ ಮೇಲೆ ಉಪನಿಷತ್ತುಗಳನ್ನು ಆರಂಭಿಸೋಣ. ಒಮ್ಮೆ ನೀವು ಗೀತೆಯನ್ನು ಚೆನ್ನಾಗಿ ಮನನಮಾಡಿಕೊಂಡರೆ, ಉಪನಿಷತ್ತುಗಳು ಸುಲಭ ವಾಗಿ ಅರ್ಥವಾಗುತ್ತವೆ –ಎಲ್ಲ ಉಪನಿಷತ್ತುಗಳ ಸಾರವೇ ಭಗವದ್ಗೀತೆ."

"ನಾಳೆಯಿಂದ ಆರಂಭಿಸುವಿರಾ ?"

"ಆಗಬಹುದು–ನಾನು ಎಷ್ಟು ಹೊತ್ತಿಗೆ ಬರಲಿ."

"ಬೆಳಿಗ್ಗೆ ಆರಕ್ಕೆ ತಾವು ಬಂದರೆ ಎಂಟರವರೆಗೆ ನಾವು ಕೂಡಬಹುದು."

"ಹಾಗೇ ಆಗಲಿ–ನಾಳೆ ಗುರುವಾರ, ದಿನವೂ ಚೆನ್ನಾಗಿದೆ"

ಎಂದು ಶಾಸ್ತ್ರಿಗಳು ಹೇಳಿ ಹೋದರು.

## ೨೮

ಬೆಳಿಗ್ಗೆ ಬೇಗ ಎದ್ದ ಜಾನಕಿ, ಶುಭ್ರಸ್ನಾತಳಾಗಿ, ಮಡಿವಸ್ತ್ರಗಳನ್ನು ಧರಿಸಿ ತನ್ನ ದೈನಂದಿನ ಪೂಜೆ ಮುಗಿಸಿದಳು.

ಮೈಲಾರಯ್ಯನೂ ಬೇಗ ಎದ್ದು ಸ್ನಾನಮುಗಿಸಿ ಶುಭ್ರವಸ್ತ್ರಗಳನ್ನು ಧರಿಸಿ, ಶಾಸ್ತ್ರಿಗಳ ಬರುವನ್ನು ನಿರೀಕ್ಷಿಸುತ್ತಿದ್ದ.

ಆರುಗಂಟೆಗೆ ಸರಿಯಾಗಿ ಶಾಸ್ತ್ರಿಗಳು ಬಂದರು.

ಜಾನಕಮ್ಮ ಶಾಸ್ತ್ರಿಗಳ ಪಾದಮುಟ್ಟಿ ನಮಸ್ಕರಿಸಿ,

" ನನಗೂ ಗೀತಾಭ್ಯಾಸ ಮಾಡಬೇಕೆಂಬ ಅಭಿಲಾಷೆಯಿದೆ ಶಾಸ್ತ್ರಿಗಳೇ. ನಾನು ಗೀತೆಯನ್ನು ಕೇಳಬಹುದೇ ?"

" ಏಕೆ ತಾಯಿ ಹೀಗನ್ನುತ್ತೀರಿ ?"

" ಹೆಂಗಸರಿಗೆ ವೇದಾಧಿಕಾರ ಇಲ್ಲವಂತಲ್ಲಾ ?"

ಶಾಸ್ತ್ರಿಗಳು ನಕ್ಕು,

" ವೇದಾಭಿಮಾನಿ ದೇವತೆ ಶ್ರೀ ಗಾಯಿತ್ರಿ ಹೆಂಗಸಲ್ಲವೇ ತಾಯಿ–ನೂರಾರು ವೇದಋಕ್ಕುಗಳನ್ನು ರಚಿಸಿರುವ ಹೆಂಗಸರು ನಮಗೆ ಮಾತೃ ಸ್ವರೂಪರಲ್ಲವೆ ? 'ಮಾತೃದೇವೋಭವ' ಎಂದು ಹೇಳುವ ಬಾಯಲ್ಲೇ ನಾವು ಹೆಂಗಸಿಗೆ ವೇದಾಧಿಕಾರವಿಲ್ಲವೆಂದು ಹೇಳುವುದು ಹಾಸ್ಯಾಸ್ಪದ !"

ಸಂತೃಪ್ತಳಾದ ಜಾನಕಿ ಗೀತಾಶ್ರವಣಕ್ಕೆ ಗಂಡನ ಜತೆ ಕುಳಿತಳು.

ಒಂದು ಗೀತಾಗ್ರಂಥವನ್ನು ಮೈಲಾರಯ್ಯನ ಕೈಗಿತ್ತ ಶಾಸ್ತ್ರಿಗಳು ತಮ್ಮ ಗ್ರಂಥವನ್ನು ಕಣ್ಣಿಗೊತ್ತಿಕೊಂಡು ಆರಂಭಿಸಿದರು:

**" ಧರ್ಮಕ್ಷೇತ್ರೇ ಕುರುಕ್ಷೇತ್ರೇ**
**ಸಮವೇತಾ ಯುಯುತ್ಸವಃ**
**ಮಾಮಕಾಃ ಪಾಂಡವಶ್ಚೈವ**
**ಕಿಮಕುರ್ವತ ಸಂಜಯ.**

ಇದು ಭಗವದ್ಗೀತೆಯ ಬೀಜಶ್ಲೋಕ. ' ಧರ್ಮಕ್ಷೇತ್ರ–ಕುರುಕ್ಷೇತ್ರ' ಎರಡು ಶಬ್ದಗಳನ್ನು ನಾವು ಸರಿಯಾಗಿ ಅರ್ಥಮಾಡಿಕೊಂಡರೆ, ಮುಂದಿನ ಎಲ್ಲಾ ಶ್ಲೋಕಗಳೂ ಸುಲಭವಾಗಿ ಅರ್ಥವಾಗುತ್ತವೆ "

ಎಂದು ಗೀತೆಯ ಹಿನ್ನೆಲೆ, ಕೃಷ್ಣಾರ್ಜುನರ ಪರಸ್ಪರಾನುಬಂಧವನ್ನು ವಿವರಿಸಿ ' ಧರ್ಮ ' ಶಬ್ದದ ಮೇಲೆ ವಿಸ್ತಾರವಾದ ವ್ಯಾಖ್ಯೆ ಮಾಡಿದರು.

ಪಾಠಪ್ರವಚನ ನಿರ್ವಿಘ್ನವಾಗಿ ನಡೆಯುತ್ತ ಬಂತು.

ಜೀವಮಾನವನ್ನೆಲ್ಲಾ ಶಿಕ್ಷಕರಾಗಿ ಕಳೆದಿದ್ದ ಶಾಸ್ತ್ರಿಗಳು, ವಿದ್ಯಾರ್ಥಿಗಳಿಗೆ ಮನದಟ್ಟಾಗುವಂತೆ ವಿಷಯ ಪ್ರತಿಪಾದಿಸುವ ನೈಪುಣ್ಯ ಗಳಿಸಿಕೊಂಡಿದ್ದರು.

ಮೂರು ತಿಂಗಳು ಕಳೆಯುವ ವೇಳೆಗೆ ಶಾಸ್ತ್ರಿಗಳು ಭಗವದ್ಗೀತೆಯ ಮೂರು ಅಧ್ಯಾಯಗಳ ನೂರ ಅರವತ್ತೇಳು ಶ್ಲೋಕಗಳನ್ನು ಮುಗಿಸಿದ್ದರು

' ಜ್ಞಾನಕರ್ಮ ಸನ್ಯಾಸಯೋಗ ' ಆರಂಭವಾಗಿತ್ತು.

ಒಂದು ದಿನ ಪಾಠ ಮುಗಿಸಿ, ಶಾಸ್ತ್ರಿಗಳೊಂದಿಗೆ ಹೊರಗೆ ಬಂದ ಮೈಲಾರಯ್ಯನ ಬಳಿಗೆ ಬಂದ ರಾಮಣ್ಣಗೌಡರು ನಮಸ್ಕರಿಸಿದರು.

ಮೈಲಾರಯ್ಯ ಆಶ್ಚರ್ಯಗೊಂಡು,

" ಯಾವಾಗ ಬಂದಿರಿ ಗೌಡರೇ " ಎಂದ.

" ಆಗಲೇ ಬಂದೆ ಸ್ವಾಮಿ."

" ನಿಮ್ಮನ್ನು ಬಹಳ ಹೊತ್ತು ಕಾಯಿಸಿಬಿಟ್ಟೆ."

" ಚಿಂತೆಯಿಲ್ಲ ಭಗವಂತನ ವಾಣಿ ಕೇಳುವ ಪುಣ್ಯ ನನಗೂ ಲಭಿಸಿತು "

ಎಂದು ತಾನು ತಂದಿದ್ದ ಹಣ್ಣು ಹೂವಿನ ತಟ್ಟೆಯನ್ನು ಮುಂದೆ ಹಿಡಿಯಲು, ಮೈಲಾರಯ್ಯ ಅದನ್ನು ಮುಟ್ಟದೆ,

" ನನ್ನ ಕಟ್ಟಳೆ ನಿಮಗೆ ಗೊತ್ತಿದೆಯಲ್ಲಾ ಗೌಡರೇ."

ನಸುಮುನಿಸುಗೊಂಡ ರಾಮಣ್ಣಗೌಡರು,

" ನಾನು ಎ. ಎಸ್. ಪಿ ಸಾಹೇಬರಿಗೆ ಲಂಚ ಕೊಡುವುದಿಕ್ಕೆ ಬಂದಿಲ್ಲ ಸ್ವಾಮಿ. ನನ್ನ ಸ್ನೇಹಿತರು ಮೈಲಾರಯ್ಯನವರನ್ನು ನೋಡಿಕೊಂಡು ಹೋಗುವುದಕ್ಕೆ ಬಂದೆ " ಎಂದರು.

ಮರುಮಾತಾಡದೆ ಮೈಲಾರಯ್ಯ ತಟ್ಟೆಯನ್ನು ಸ್ವೀಕರಿಸಿ, ಅರ್ಧಭಾಗವನ್ನು ಶಾಸ್ತ್ರಿಗಳಿಗಿತ್ತು, ಉಳಿದರ್ಧವನ್ನು ಒಳಗೆ ಕಳಿಸಿಕೊಟ್ಟ.

ಶಾಸ್ತ್ರಿಗಳು ಹೊರಡಲು, ಮೈಲಾರಯ್ಯ ಗೌಡರ ಕೈ ಹಿಡಿದುಕೊಂಡು, ಅವರನ್ನು ಒಳಗೆ ಕರೆದುಕೊಂಡು ಬಂದು ಕೂಡಿಸಿಕೊಂಡು,

"ಎಷ್ಟು ದಿವಸವಾಯಿತು ನಿಮ್ಮನ್ನು ನೋಡಿ ಗೌಡರೇ–ಚೆನ್ನಾಗಿದ್ದೀರಾ?"

"ತಮ್ಮ ಆಶೀರ್ವಾದದಿಂದ ಚೆನ್ನಾಗಿದ್ದೇನೆ ಸ್ವಾಮಿ ನಮ್ಮ ಊರು ಬಿಟ್ಟವರು ನೀವು–ನಮ್ಮನ್ನು ಮರೆತೇ ಬಿಡುವುದೇ ?"

"ಇಲ್ಲಪ್ಪಾ–ಮರೆತಿಲ್ಲ. ನನಗೂ ತಾಪತ್ರಯ ಪರಂಪರೆಯೇ ಆರಂಭ ವಾಯಿತು ಗೌಡರೇ. ನನ್ನ ತಮ್ಮನ ಅತ್ತೆ–ಮಾವ ಹದಿನೈದು ದಿವಸಗಳ ಅಂತರದಲ್ಲಿ ತೀರಿಕೊಂಡರು–ನೋಲೂರಿನಿಂದ ಇಲ್ಲಿಗೆ ಟ್ರಾನ್ಸ್‌ಫರ್ ಆಯಿತು."

"ತಮಗೆ ರಾಷ್ಟ್ರಾಧ್ಯಕ್ಷರ ಪದಕ ದೊರಕಿದ್ದು–ತಾವು ಎ. ಎಸ್. ಪಿ ಆದ್ದು ಪೇಪರಿನಲ್ಲಿ ಓದಿದೆ.–ನಾವು ನಿರ್ಭಾಗ್ಯರು ಸ್ವಾಮಿ. ತಮ್ಮಂಥ ಧಣಿ ಯನ್ನು ನಮ್ಮ ಊರಿನಲ್ಲಿ ಉಳಿಸಿಕೊಳ್ಳಲಿಲ್ಲ."

"ಅದು ಹೋಗಲಿ–ನಿಮ್ಮ ಶಾಲೆ ಹೇಗೆ ನಡೆದಿದೆ."

"ಶಾಲೆ ಮುಂದುವರಿಸೋದಿಕ್ಕೆ ಪರ್ಮಿಷನ್ (Permission) ಸಿಕ್ಕಿತು–ಈ ವರ್ಷ ಗ್ರ್ಯಾಂಟೂ ಸ್ಯಾಂಕ್ಷನ್ ಮಾಡಸ್ತೀನಿ ಎಂದು ಶಿಕ್ಷಣ ಮಂತ್ರಿಗಳು ಹೇಳಿದ್ದಾರೆ."

"ಜಯಭೇರಿ ಹೊಡೆದಿರಿ."

"ಎಲ್ಲಾ ತಮ್ಮ ಆಶೀರ್ವಾದ."

"ನನ್ನ ಪರಮ ಮಿತ್ರರು ದೊಡ್ಡೇಗೌಡರು ಹೇಗಿದ್ದಾರೆ ?"

"ಯಥಾಪ್ರಕಾರ–ಈಚೆಗೆ ಅವರು ಏನೋ ತರಲೆಗೆ ಸಿಕ್ಕಿಹಾಕಿಕೊಂಡಿರುವ ಹಾಗೆ ಕಾಣುತ್ತದೆ. ಮುಖ್ಯ ಮಂತ್ರಿಗಳನ್ನು 'ಇಂದ್ರ ಚಂದ್ರ' ಎನ್ನುತ್ತಿದ್ದವರು ಈಗ ಬಾಯಿಗೆ ಬಂದಂತೆ ಬಯ್ಯಲಾರಂಭಿಸಿದ್ದಾರೆ."

"ಆ ಮನುಷ್ಯ ಎಂದೋ ಜೈಲು ಸೇರುತ್ತಾನೆ ಗೌಡರೇ–ಈ ಊರಿಗೆ ಯಾವಾಗ ಬಂದಿರಿ–ಏನು ಸಮಾಚಾರ–ಎಲ್ಲಾ ವಿಸ್ತಾರವಾಗಿ ಹೇಳಿಯಪ್ಪ."

ಗೌಡರು ಆರಂಭಿಸುವಷ್ಟರಲ್ಲಿ ಒಳಗಿನಿಂದ ತಿಂಡಿ, ಕಾಫಿ ಬರಲು,

"ಮೊದಲು , ಕಾಫಿ ತೆಗೆದುಕೊಳ್ಳಿ–ಆಮೇಲೆ ನಿಧಾನವಾಗಿ ಮಾತಾ ಡೋಣ."

ಇಬ್ಬರೂ ಉಪಾಹಾರ ಮುಗಿಸಲು, ಗೌಡರು ಮೆಲ್ಲನೆ,

"ನಾನು ಬಂದು ಎರಡು ದಿವಸವಾಯಿತು " ಎಂದರು.

"ಎರಡು ದಿವಸದಿಂದ ಇಲ್ಲೇ ಇದ್ದುಗೊಂಡು ನನ್ನ ನೋಡದೆ ಇದ್ದೀರಾ–ನನಗೆ ಸ್ವಲ್ಪ ಗೊತ್ತಾಗಿದ್ದರೆ ನಿಮ್ಮನ್ನು ಅರೆಸ್ಟ್ ಮಾಡಿಸಿ ಬಿಡುತ್ತಿದ್ದೆ."

"ಮನೆ ಕೆಲಸವಿತ್ತು–ಅದನ್ನು ಮುಗಿಸಿಕೊಂಡೇ ತಮ್ಮನ್ನು ಕಾಣುವುದು ಎಂದು ಸುಮ್ಮನಿದ್ದೆ."

"ಇಲ್ಲಿ ನಿಮ್ಮ ಬಂಧುಗಳು ಇದ್ದಾರೆಯೇ ?"

" ಇದ್ದಾರೆ. ಬೈಲುಗದ್ದೆ ವೆಂಕಟೇಗೌಡರು ತಮಗೆ ಗೊತ್ತಿರಬಹುದು."

" ಅಡಿಕೆ ಮಂಡಿ ವೆಂಕಟೇಗೌಡರು."

" ಹೌದು."

" ಗೊತ್ತು."

" ಅವರ ಮಗಳನ್ನು ನನ್ನ ಮಗನಿಗೆ ತಂದುಕೊಳ್ಳಬೇಕೆಂದಿದ್ದೇವೆ."

" ಬಹಳ ಸಂತೋಷ. ಗೌಡರು ತುಂಬ ಸಂಭಾವಿತರು ಎಂದು ಕೇಳಿದ್ದೇನೆ."

" ಒಳ್ಳೆಯ ಗುಣ, ನಡತೆ, ನಿಯತ್ತು ಎಲ್ಲಾ ಈ ಕಾಲದಲ್ಲ ಪ್ರಯೋಜನಕ್ಕೆ ಬರುವುದಿಲ್ಲ ಎಂದು ನಾವು ಭಾವಿಸಿದ್ದೇವೆ. ವೆಂಕಟೇಗೌಡರನ್ನು ನೋಡಿದರೆ ಆ ಮಾತು ಸುಳ್ಳು ಎನಿಸತ್ತೆ."

" ಹೆಣ್ಣು ನಿಶ್ಚಯವಾಯಿತೇ ?"

" ಆಯಿತು."

" ಹಾಗಾದರೆ ಬೇಗ ನಮಗೆಲ್ಲಾ ಲಾಡು, ಚಿರೋಟಿ ಹಾಕಿಸ್ತೀರಿ."

" ನಿಮ್ಮ ಔತಣವೂ ಬಾಕಿ ಇದೆ "

" ಇದೆಯಪ್ಪಾ–ಈಗ ನಿಮಗೆ ಒಂದಲ್ಲ ಎರಡು ಔತಣ ನಾನು ಕೊಡಬೇಕಾಗಿದೆ."

" ಏಕೆ ?"

" ನಾನೂ ಕನ್ಯಾರ್ಥಿಯಾಗಿದ್ದೇನೆ. ಅಣಿಯಾದ ಕಡೆಯ ಹೆಣ್ಣು ಸಿಕ್ಕಿದರೆ ನನ್ನ ತಮ್ಮನ ಭಾವನ್ಮೈದುನ ರಂಗಣ್ಣನ ಮದುವೆ ಮಾಡಿಬಿಡಬೇಕೆಂದಿದ್ದೇನೆ. ವೆಂಕಣ್ಣನವರು, ಅಂಬಮ್ಮನವರು ತೀರಿಕೊಂಡ ಮೇಲೆ ಆ ಮನೆ ಶೂನ್ಯವಾಗಿ ಹೋಗಿದೆ. ರಂಗಣ್ಣನ ಹೆಂಡತಿ, ಆ ಮನೆ ದೀಪ ಹಚ್ಚಿ ಅದಕ್ಕೆ ಮತ್ತೆ ಕಳೆ ತುಂಬಬೇಕಾಗಿದೆ. ಈ ವಿಷಯ ಕುರಿತು ನಮ್ಮ ಮನೆಯವರು ಹಗಲೂ ರಾತ್ರಿ ಯೋಚಿಸುತ್ತಿದ್ದಾರೆ."

" ಯಾವದೋ ವಿಷಯದಿಂದ ಯಾವದೋ ವಿಷಯಕ್ಕೆ ನಾನು ಹಾರುತಿದ್ದೇನೆಂದು ತಾವು ಭಾವಿಸಬಾರದು. ಅಪ್ಪಣೆಯಾದರೆ ವೆಂಕಟೇಗೌಡರ ವಿಷಯ ಸ್ವಲ್ಪ ತಿಳಿಸುತ್ತೇನೆ."

" ಹೇಳಿ."

" ತಮಗೆ ಪುರಸತ್ತು ಇದೆಯಷ್ಟೇ ?"

" ಇದೆಯಪ್ಪಾ–ಹೇಳಿ."

" ವೆಂಕಟೇಗೌಡರು ಮೊದಲು ಬಹಳ ಬಡತನದಲ್ಲಿದ್ದರು, ಚಿಕ್ಕ

ವಯಸ್ಸಿನಲ್ಲೇ ಗುಂಡೂ ಶ್ರೌತಿಗಳ ಅಡಿಕೆಮಂಡೀಗೆ ನೌಕರರಾಗಿ ಸೇರಿದರು. ಈ ಹುಡುಗನ ಗುಣ ನೋಡಿ ಶ್ರೌತಿಗಳಿಗೆ ವಿಶ್ವಾಸ ಹುಟ್ಟಿತು. ಆರೇಳು ವರ್ಷ ಗಳಲ್ಲಿ ತಮ್ಮ ಅಂಗಡಿಯ ವಹಿವಾಟನ್ನೆಲ್ಲಾ ಗೌಡರಿಗೇ ಒಪ್ಪಿಸಿದರು. ಮಂಡಿಯ ಯಾಜಮಾನ್ಯ ಶ್ರೌತಿಗಳದ್ದಾದರೂ ಎಲ್ಲಾ ಕೆಲಸ ನಿರ್ವಹಿಸುತ್ತಿದ್ದವರೇ ಗೌಡರು. ಕೆಲಕಾಲಾನಂತರ ಶ್ರೌತಿಗಳು ಗೌಡರಿಗೆ, ಅಂಗಡಿಯಲ್ಲಿ ನಾಲ್ಕಾಣೆ ಪಾಲು ಕೊಡಲಾರಂಭಿಸಿದರು. ಅದು ಕಾಲಕ್ರಮೇಣ ಆರಾಣೆ ಪಾಲಾಗಿ, ಎಂಟಾಣೆಗೆ ನಿಂತಿತು. ಶ್ರೌತಿಗಳ ದೊಡ್ಡಮಗ ನರಸಿಂಹ ಶ್ರೌತಿ ವಯಸ್ಸಿಗೆ ಬಂದು, ಅಂಗಡಿ ಯಲ್ಲಿ ಬಂದು ಕೂಡಲಾರಂಭಿಸಿದ. ಅವನಿಗೂ ಗೌಡರಿಗೂ ಆಗಾಗ್ಗೆ ತಿಕ್ಕಾಟ ವಾಗುತ್ತಿತ್ತು. ಶ್ರೌತಿಗಳ ಎರಡನೆಯ ಮಗ ವಾಸುದೇವ ಗೌಡರ ಬಗ್ಗೆ ವಿಶ್ವಾಸ ತಳೆದಿದ್ದ.

ಗುಂಡೂ ಶ್ರೌತಿಗಳಿಗೆ ವಯಸ್ಸಾಗುತ್ತ ಬಂತು. ಒಂದು ವರ್ಷ ಅವರು ಶೃಂಗೇರಿ ಸೇವೆ ಮುಗಿಸಿಕೊಂಡು ಬಂದವರೇ ಗೌಡರನ್ನು ಕರೆಸಿ, 'ವೆಂಕಟೇ ಗೌಡ, ನನ್ನ ಕಾಲ ಸಮೀಪಿಸುತ್ತಿದೆಯೆಂದು ಕಾಣುತ್ತದೆ. ನನ್ನ ತರುವಾಯ, ನರಸಿಂಹ ನಿನ್ನ ಸರಿಯಾಗಿ ನಡೆಸಿಕೊಳ್ಳುತ್ತಾನೆ ಎನ್ನುವ ನಂಬಿಕೆಯಿಲ್ಲ. ನಿನ್ನದೇ ಸ್ವಂತ ಮಂಡಿ ಇಡು–ನಿನಗೆ ನಾನು ಬಂಡವಾಳ ಕೊಡುತ್ತೇನೆ' ಎಂದು ಮಂಡಿ ಇಡಿಸಿ, ಗೌಡರಿಗೆ ಸಲ್ಲಬೇಕಾಗಿದ್ದ ಹಣಕ್ಕಿಂತಲೂ ಹೆಚ್ಚಿಗೆ ಕೊಟ್ಟು ಉಳಿದ ಆಸ್ತಿಯನ್ನು ಮಕ್ಕಳಿಗೆ ವಿಭಾಗಮಾಡಿಕೊಟ್ಟರು. ಗೌಡರು ಸ್ವಪ್ರಯತ್ನ ದಿಂದ ತಮ್ಮ ಮಂಡಿ ಬೆಳಸಿ, ದೊಡ್ಡ ಕುಳವಾದರು. ಈ ವ್ಯವಸ್ಥೆಯಿಂದ ಗೌಡರು ಶ್ರೌತಿಗಳ ಮಕ್ಕಳ ವಿಶ್ವಾಸವೂ ಉಳಿಯಿತು. ಇವತ್ತಿಗೂ ಗೌಡರು ದಿನಕ್ಕೊಮ್ಮೆ ನರಸಿಂಹ ಶ್ರೌತಿ ಮಂಡೀಗೆ ಹೋಗಿ ಯೋಗಕ್ಷೇಮ ವಿಚಾರಿಸಿ ಕೊಂಡು, ಅವರ ಹಿತರಕ್ಷಣೆ ಮಾಡುತ್ತಿದ್ದಾರೆ.

ಗುಂಡೂ ಶ್ರೌತಿಗಳಿಗೆ ನರಸಿಂಹ ದೊಡ್ಡಮಗ, ಎರಡನೆಯವನೇ ವಾಸು ದೇವ, ಮೂರನೆಯವಳು ಮಗಳು ಶಾರದಮ್ಮ. ಮಗಳ ಲಗ್ನವಾಗುವುದಕ್ಕೆ ಮುಂಚೆಯೇ ಶ್ರೌತಿಗಳು ದೈವಾಧೀನರಾದರು. ಈಗ ಶಾರದಮ್ಮ ವಯಸ್ಸಿಗೆ ಬಂದಿದ್ದಾಳೆ. ನರಸಿಂಹ ಗಂಡು ಹುಡುಕುತ್ತಿದ್ದಾನೆ. ತಮ್ಮ ತಮ್ಮಂದಿರ ಭಾವಮೈದುನನಿಗೆ ಏಕೆ ಯೋಚನೆ ಮಾಡಬಾರದು ?"

"ಶ್ರೌತಿಗಳು ಶ್ರೀಮಂತರು–ನಾವು ಬಡವರು ಗೌಡರೇ. ಹುಡುಗ ಹೆಚ್ಚು ಓದಿದವನೂ ಅಲ್ಲ. ತಂದೆಯೇನೋ ಹೊಲಗದ್ದೆ ಮನೆ ಮಾಡಿಟ್ಟು ಹೋಗಿ ದ್ದಾರೆ. ಹುಡುಗನೂ ಯೋಗ್ಯ. ಒಕ್ಕಲುತನ ಮಾಡಿಕೊಂಡಿದ್ದಾನೆ."

"ಶ್ರೋತ್ರಿಗಳ ಮನೆಯವರು ಯಾರೂ ಬಡತನ, ಶ್ರೀಮಂತಿಕೆ ನೋಡು ವವರಲ್ಲ ಸ್ವಾಮಿ. ಇಂದಿಗೂ ಅವರದು ತುಂಬಿದ ಮನೆ. ಒಬ್ಬ ಅಡಿಗೆಯವ ಳನ್ನು ಕೂಡಾ ಇಟ್ಟುಕೊಂಡಿಲ್ಲ. ನರಸಿಂಹ, ವಾಸು ಹೆಂಡತಿಯರೇ ಅಡಿಗೆ ಕೆಲಸ ಮಾಡುತ್ತಾರೆ. ಶಾರದಮ್ಮನನ್ನು ನಾನು ಮಗುವಿನಿಂದಲೂ ನೋಡುತ್ತಿದ್ದೇನೆ. ಬಲು ಒಳ್ಳೆಯ ಸ್ವಭಾವ. ನನ್ನ ದೃಷ್ಟಿಯಲ್ಲಿ ಈ ಸಂಬಂಧ ತಮಗೆ ಯೋಗ್ಯ ವಾಗಿದೆ."

"ಆಗಲಿ–ಪ್ರಯತ್ನಿಸಿ ನೋಡೋಣ ಗೌಡರೇ."

"ನಾಳೆ ನಾಡಿದ್ದು ನರಸಿಂಹನನ್ನು ನಿಮ್ಮನ್ನು ನೋಡಲು ಹೇಳುತ್ತೇನೆ."

"ಹೇಳಿ. ಹುಡುಗನನ್ನೂ ಕರೆಸುತ್ತೇನೆ–ಅವರೂ ನೋಡಲಿ. ಋಣಾನು ಬಂಧವಿದ್ದರೆ ಸಂಬಂಧ ಕೂಡಲಿ."

ರಾಮಣ್ಣಗೌಡರು ಮೇಲಕ್ಕೇಳಲು,

"ಇದೇನು ಗೌಡರೇ ಹೊರಟುಬಿಟ್ಟಿರಿ. ನಮ್ಮ ಮನೆಯಲ್ಲಿ ಒಪ್ಪತ್ತು ಊಟಮಾಡುವುದಿಲ್ಲವೇನು ?"

"ದೊಡ್ಡ ಊಟಕ್ಕೆ ಬರುತ್ತೇನೆ ಸ್ವಾಮಿ–ಇವತ್ತು ಕ್ಷಮಿಸಬೇಕು. ನಾನು ಊರಿಗೆ ಹೊರಟಿದ್ದೇನೆ–ತಾವು ನಮ್ಮ ಊರಿಗೆ ಬರುವುದು ಯಾವಾಗ ?"

"ಬೆಂಗಳೂರು ಡಿಸ್ಟ್ರಿಕ್ಟ್‌ಗೆ ಟ್ರಾನ್ಸ್‌ಫರ್ ಆದರೆ ನಿಮ್ಮೂರಿಗೆ ಬರಲೇ ಬೇಕಾಗುತ್ತದೆ."

"ನಮ್ಮ ಕಡೆ ಬೇಗ ಬಂದುಬಿಡಿ ಸ್ವಾಮಿ."

"ನನ್ನ ಕೈಯಲ್ಲಿ ಏನಿದೆ ಗೌಡರೇ" ಎಂದ.

ರಾಮಣ್ಣಗೌಡರು ನಮಸ್ಕರಿಸಿ ಅಲ್ಲಿಂದ ಹೊರಟರು.

ಅವರನ್ನು ಬೀಳ್ಕೊಟ್ಟ ಮೇಲೆ ಹೆಂಡತಿಯನ್ನು ಕರೆದು ಮೈಲಾರಯ್ಯ ಎಲ್ಲ ವಿಷಯ ತಿಳಿಸಲು, ಹರ್ಷಗೊಂಡ ಜಾನಕಮ್ಮ,

"ಶ್ರೋತ್ರಿಗಳ ಮನೆ ವಿಷಯ ನಾನೂ ಕೇಳಿದ್ದೇನೆ. ಜನ ಬಹಳ ಒಳ್ಳೆಯವರಂತೆ. ರಂಗಣ್ಣನಿಗೆ ಈ ಸಂಬಂಧ ಕುದುರಿಸಿ. ನೀವೇ ಅವನಿಗೊಂದು ಕಾಗದ ಬರೆದು ಇಲ್ಲಿಗೆ ಕರೆಸಿ" ಎಂದಳು.

"ಈಗಲೇ ಬೇಡ ಜಾನಕಿ–ನರಸಿಂಹ ಶ್ರೋತ್ರಿಗಳು ಬಂದು ಮಾತಾಡಿ ಕೊಂಡು ಹೋಗಲಿ. ಮೊದಲು ನೀನು ಹೆಣ್ಣು ನೋಡು. ನಿನಗೆ ಹುಡುಗಿ ಒಪ್ಪಿಗೆಯಾದರೆ, ಮಾತು ಮುಂದುವರಿಸೋಣ" ಎಂದ.

# ೨೯

ನಿಶ್ಚಯಪೂರ್ವದ ಚಟುವಟಿಕೆಗಳು ಆರಂಭವಾದವು.

ನರಸಿಂಹ ಶ್ರೌತಿ ಬಂದು ಮೈಲಾರಯ್ಯನನ್ನು ಕಂಡು ಮನೆಗೆ ಆಹ್ವಾನಿಸಿದ.

ಮೈಲಾರಯ್ಯ, ಜಾನಕಮ್ಮ ಅವರ ಮನೆಗೆ ಹೋಗಿ ಹೆಣ್ಣು ನೋಡಿಕೊಂಡು ಬಂದರು.

ಕೂಡಲೆ ಕಾಗದ ಬರೆದು ರಂಗಣ್ಣ, ಸುಭದ್ರ, ಶಾಮುನನ್ನು ಕರೆಸಲು ಜಾನಕಮ್ಮ ಒತ್ತಾಯ ಮಾಡಿದಳು.

ಮೈಲಾರಯ್ಯನ ಪತ್ರ ಕೈ ಸೇರಿದ ಕೂಡಲೆ ರಂಗಣ್ಣ ಬೆಂಗಳೂರಿಗೆ ಬಂದ. ಸುಭದ್ರಾ ಹೊರಡಲು ಸಿದ್ಧವಾಗಿದ್ದಳು.

" ನನಗೆ ರಜಾ ಸಿಕ್ಕುವುದಿಲ್ಲ. ನೀನೂ ರಂಗಣ್ಣ ಹೋಗಿಬನ್ನಿ"

ಎಂದು ಶಾಮು ಹೇಳಿಬಿಟ್ಟ.

ಸುಭದ್ರಾ ತಮ್ಮನೊಂದಿಗೆ ಶಿವಮೊಗ್ಗೆಗೆ ಪ್ರಯಾಣ ಬೆಳಸಿದಳು.

ತಂಗಿಯನ್ನು ಹಾರ್ದಿಕವಾಗಿ ಸ್ವಾಗತಿಸಿದ ಜಾನಕಮ್ಮ ಮಗುವನ್ನು ಎತ್ತಿಕೊಂಡು ಅಪ್ಪಿ ಮುದ್ದಾಡುತ್ತಾ,

" ಎಷ್ಟು ಬೆಳೆದುಬಿಟ್ಟಿತೇ ಇದು–"

ಎಂದು ಸುಭದ್ರೆಯನ್ನು ದಿಟ್ಟಿಸಿ ನೋಡಿ,

" ಮಗ ಆಗ್ಲಿಲ್ಲಾಂತ ಯೋಚಿಸ್ತಿದ್ದೆ–ಈ ಸಾರೆ ಮಗನೇ ಹುಟ್ಟುತ್ತಾನೆ ಸುಮ್ಮನಿರು " ಎಂದಳು.

" ನನಗೇಕೋ ಭಯವಾಗತ್ತೆ ಅಕ್ಕಾ."

" ಭಯವೇಕೇ ಹುಚ್ಚಿ--ಈ ಸಲ ಬಾಣಂತನ ನಾನು ಮಾಡ್ತೀನಿ "

ಎಂದು ತುಂಬಿದ ಬಸುರಿಯನ್ನಪ್ಪಿಕೊಂಡು,

" ಸುಭದ್ರಾ–ನಿಮ್ಮಮ್ಮನ್ನ ನಾನು ತಂದುಕೊಡಲಾರೆ ಕಣೇ–ಅವರಿದ್ದಿದ್ದರೆ...."

ಸುಭದ್ರೆಯೂ ಕಣ್ಣೀರ್ಗರೆಯುತ್ತ,

" ನೀವು ಇರುವಾಗ ನನಗೇನು ಕೊರತೆ ಅಕ್ಕಾ " ಎಂದಳು.

ಜಾನಕಮ್ಮ ಶ್ರೌತಿಗಳವರ ಮನೆಯ ವಿಷಯ, ಶಾರದೆಯ ವಿಷಯ ವಿವರಿಸಿದ ಮೇಲೆ ಸಂತೋಷಭರಿತಳಾದ ಸುಭದ್ರಾ,

" ನನ್ನ ಮನೆ ನಿಲ್ಲಿಸಿದಿರಿ–ನನ್ನ ತೌರು ಮನೆ ನಿಲ್ಲಿಸುತ್ತಾ ಇದ್ದೀರಿ–ನಿಮ್ಮ ಋಣ ಯಾವ ಜನ್ಮಕ್ಕೆ ನಾನು ತೀರಿಸಲಿ ಅಕ್ಕಾ."

" ನನಗೊಬ್ಬ ಪುಟ್ಟ ತಮ್ಮ ಇದ್ದಿದ್ದರೆ ಮನೂನ ಅವನಿಗೇ ತಂದು ಕೊಂಡು ಬಿಡ್ತಿದ್ದೆ ಕಣೇ–ಒಂಟಿಬಡಕಿ ಹಾಗೆ ಹುಟ್ಟಿದೆ–ಒಂಟಿಬಡಕಿ ಹಾಗೆ ಬಾಳ್ತಾ ಇದ್ದೀನಿ."

" ನೀವು ಕಣ್ಣಲ್ಲಿ ನೀರು ಹಾಕಬೇಡಿ ಅಕ್ಕಾ–ನಾನು ನೋಡಲಾರೆ. ನಾನಿಲ್ಲವೇ ನಿಮ್ಮ ಮಗಳು–ರಂಗಣ್ಣ ನಿಮ್ಮ ಮಗ ಅಲ್ಲವೆ ?"

ಸಮಾಧಾನ ತಂದುಕೊಂಡ ಜಾನಕಮ್ಮ,

" ನನ್ನ ಬುದ್ಧಿಗೇನು ಮಂಕು ಬಂತು ಹೇಳು. ತುಂಬಿದ ಬಸುರಿ–ಆಯಾಸ ಪಟ್ಟುಕೊಂಡು ಬಂದಿದ್ದೀ–ನಿನಗೊಂದು ಕಪ್ ಹಾಲು ಕೊಡದೆ ಅಳುತ್ತಾ ಕೂತಿದ್ದೇನಲ್ಲಾ–ಒಳಗೆ ಬಾ ಸುಭದ್ರಾ "

ಎಂದು ಸುಭದ್ರನನ್ನೂ ಮನುವನ್ನೂ ಒಳಕ್ಕೆ ಕರೆದುಕೊಂಡು ಹೋದಳು.

ಎರಡು ದಿನಗಳ ತರುವಾಯ 'ಕ ನ್ಯಾ ವೀ ಕ್ಷ ಣೆ'ಯ ಕೆಲಸವೂ ಮುಗಿಯಿತು.

ನರಹರಿಶಾಸ್ತ್ರಿಗಳೇ ಗಂಡು, ಹೆಣ್ಣಿನ ಜಾತಕಗಳನ್ನು ನೋಡಿ ದಾಂಪತ್ಯಾನುಕೂಲ ಚೆನ್ನಾಗಿದೆಯೆಂದರು.

ಮೈಲಾರಯ್ಯ, ಎಲ್ಲರ ಅಭಿಪ್ರಾಯ ತಿಳಿದು ನರಸಿಂಹ ಶ್ರೌತಿಗೆ ಒಪ್ಪಿಗೆಯನ್ನಿತ್ತ.

ಅದೇ ವಾರದಲ್ಲಿ ಶ್ರೌತಿ 'ಲಗ್ನಪತ್ರಿಕಾ ಸಮಾರಂಭ' ಏರ್ಪಡಿಸಿದ. ಚೈತ್ರಮಾಸದಲ್ಲಿ ಲಗ್ನ ನಿಶ್ಚಯವಾಯಿತು.

ಶ್ರೌತಿ ಬೀಗರು, ಬೀಗಿತ್ತಿ, ಭಾವಮೈದುನನಿಗೆ ಔತಣ ಏರ್ಪಡಿಸಿದ.

ಸುಭದ್ರಾ, ರಂಗಣ್ಣ ಬಂದಿದ್ದ ಕೆಲಸ ಮುಗಿದಿತ್ತು.

ಅವಳು ಹೊರಡಬೇಕೆಂದು ಚಡಪಡಿಸಲು,

" ಬಂದು ಇನ್ನೂ ಒಂದು ವಾರವಾಗಿಲ್ಲ–ಏನವಸರವೇ ? ಭಾನುವಾರ ಅವರಿಗೂ ರಜಾ ಇರತ್ತೆ–ಎಲ್ಲರೂ ಜೋಗಿಗೆ ಹೋಗಿಬರೋಣ. ಶಾರದನನ್ನೂ ಜತೆಯಲ್ಲಿ ಕರೆದುಕೊಂಡು ಹೋಗೋಣ."

" ನಾನು ಬಹಳ ದಿನಸ ನಿಲ್ಲುವ ಹಾಗಿಲ್ಲ ಅಕ್ಕಾ–ಅವರು ಕೋಪ ಮಾಡಿಕೊಳ್ಳುತ್ತಾರೆ."

" ನೀನು ಇಲ್ಲಿದ್ದರೆ ಶಾಮನಿಗೆ ಕೋಪವೇ ?"

" ನೋಲೂರಿನಲ್ಲೇ ನಾನು ನಿಮಗೊಂದು ಮಾತು ಹೇಳಿದ್ದೆ. ಆಗ ನೀವು ನನ್ನೇ ಬಯ್ದು ಬಿಟ್ಟರಿ."

" ಹೌದು."

" ಅದನ್ನೇ ಈಗಲೂ ಹೇಳಬೇಕಾಗಿದೆ."

" ಶಾಮನಿಗೇಕೆ ಬಂತೇ ಈ ಸಣ್ಣ ಬುದ್ಧಿ."

" ತರಕಾರೀಗೆ ಒಂದಾಣೆ ಹೆಚ್ಚು ಖರ್ಚುಮಾಡಿದರೆ ಸಿಡಗುಟ್ಟುತ್ತಾರೆ– ಮನೆಮುಂದೆ ಬಳೆ, ರಿಬ್ಬನ್, ಆಟದ ಸಾಮಾನುಗಳನ್ನು ಮಾರುವವರು ಸುಳಿ ದರೆ ಮನೂ ಅವರನ್ನು ಒಳಗೆ ಕರೆದುಕೊಂಡು ಬರುತ್ತಾಳೆ. ಮಗೂಗೆ ಒಂದು ರಿಬ್ಬನ್ ತೆಗೆದುಕೊಟ್ಟರೆ, ಒಂದು ದಿನವೆಲ್ಲಾ ಜಗಳ ಕಾಯ್ತಾರಕ್ಕಾ. ನನಗೆ, ಮನೂಗೆ ಅನ್ನ ಹಾಕುವುದು ಕೂಡ ಅವರಿಗೆ ಭಾರವಾಗಿದೆ–ಕೆಲವು ದಿವಸಗಳ ಹಿಂದೆ . ರಂಗಣ್ಣ ' ಕಂದಾಯ ಕಟ್ಟಬೇಕಾಗಿದೆ. ಹಣ ಸ್ವಲ್ಪ ಸಾಲದಾಗಿದೆ. ಮೂವತ್ತು ರೂಪಾಯಿ ಕಳಿಸಿಕೊಡು. ಆಲೂಗೆಡ್ಡೆ ಫಸಲು ಬಂದಿದೆ–ಅದನ್ನು ಮಾರಿ ಹಣ ಕಳಿಸಿಕೊಡುತ್ತೇನೆ ' ಎಂದು ಕಾಗದ ಬರೆದ. ತಿಂಗಳ ಖರ್ಚಿಗೆ ಅವರು ಕೊಟ್ಟಿದ್ದ ದುಡ್ಡು ನನ್ನ ಹತ್ತಿರ ಇತ್ತು–ಮೂವತ್ತು ರೂಪಾಯಿ ನಾನು ರಂಗಣ್ಣನಿಗೆ ಕಳಿಸಿಕೊಟ್ಟೆ. ಮನೆ ಖರ್ಚಿಗೆ ಹಣ ನಾಲ ದಾಯಿತು–ಅವರನ್ನು ಕೇಳಿದೆ. ಅದಕ್ಕೆ ರಂಪ ರಾದ್ಧಾಂತ ಮಾಡಿ ನಮ್ಮಮ್ಮ ಅಪ್ಪನ ಕುಲಕೋಟಿಯನ್ನೆಲ್ಲಾ ತೊಳೆದುಬಿಟ್ಟರು. ಹೀಗಾದರೆ ನಾನು ಪೂರೈಸು ವುದು ಹೇಗೆ ಜಾನಕಕ್ಕ. ನನ್ನ ಸೌಭಾಗ್ಯಕ್ಕೆ ಇಷ್ಟೂ ಬಂದಾಯಿತು."

" ಕಣ್ಣೀರಿನಲ್ಲಿ ಕೈತೊಳೆಯುವುದು ನಮ್ಮ ಜಾಯಮಾನಕ್ಕೇ ಬಂದದ್ದು– ಹೋಗಲಿ ಸುಮ್ಮನಿರು. ಇಲ್ಲಿಗೆ ಶಾಮು ಬರಲಿ...."

" ನೀವು ಏನೂ ಅನ್ನಬೇಡಿ ಅಕ್ಕಾ–ಅದನ್ನೇ ದೊಡ್ಡದು ಮಾಡಿಕೊಂಡು ನನ್ನ ಪ್ರಾಣ ಹಿಂಡುತ್ತಾರೆ."

ಆ ಅಸಹಾಯಕ ಸ್ಥಿತಿ ನೆನೆದು ಜಾನಕಮ್ಮ ಮಮ್ಮಲ ಮರುಗಿದಳು.

" ಭಾನುವಾರದವರೆಗೂ ಇದ್ದು ಬಿಡು. ನಾನು ಅವರ ಕೈಯಲ್ಲೇ ಶಾಮ ನಿಗೆ ಕಾಗದ ಬರೆಸಿ ಹಾಕಿಸುತ್ತೇನೆ. ಸೋಮವಾರ ಪ್ರಯಾಣ ಮಾಡಿದ ರಾಯಿತು."

ಜೋಗಿಗೆ ಮೊದಲೇ ತಿಳಿಸಿ, ಮೈಲಾರಯ್ಯ ಎಲ್ಲ ವ್ಯವಸ್ಥೆಯನ್ನೂ ಮಾಡಿದ.

ಭಾನುವಾರ ಬೆಳಿಗ್ಗೆ ಜಾನಕಮ್ಮ, ಸುಭದ್ರಾ, ರಂಗಣ್ಣ, ಮೈಲಾರಯ್ಯ ಮನೆಬಿಟ್ಟು ಹೊರಟು, ಶ್ರೋತ್ರಿಗಳ ಮನೆಗೆ ಹೋಗಿ ಶಾರದೆಯನ್ನು ಜತೆಯಲ್ಲಿ ಕರೆದುಕೊಂಡು ಜೋಗಿಗೆ ಹೊರಟರು.

ಜೋಗದ ಪ್ರಕೃತಿ ಸೌಂದರ್ಯ ನೋಡಿ ಎಲ್ಲರೂ ವಿಸ್ಮಯಗೊಂಡರು. ನಾಲ್ಕು ತಡಸಲಿನಿಂದ ಒಂದೇ ಸಮನಾಗಿ ಸುರಿಯುತ್ತಿದ್ದ ಅಮೃತವರ್ಷ ಕಂಡು ಪುಳಕಿತನಾದ ಮೈಲಾರಯ್ಯ,

" ಆಕಾಶದಿಂದ ಭಗವದ್ಕರುಣೆ ಸುರಿಯುತ್ತಿದೆ–ನಾವು ಅದನ್ನು ಸ್ವೀಕರಿಸುತ್ತಿಲ್ಲ ಅಷ್ಟೇ !" ಎಂದ.

ಜೋಗದಲ್ಲಿಯೇ ಊಟಮಾಡಿ ಎಲ್ಲರೂ ಸಾಯಂಕಾಲ ಶಿವಮೊಗ್ಗೆಗೆ ಹಿಂದಿರುಗಿದರು.

ಸೋಮವಾರ ಸುಭದ್ರಾ, ರಂಗಣ್ಣ ಹೊರಟುನಿಂತರು.

ತಂಗಿಯ ಹಣೆಗಿಟ್ಟು ಅರಶಿನ ಕುಂಕುಮ, ತಾಂಬೂಲ ಕೊಡುತ್ತಾ ಜಾನಕಮ್ಮ ಒಂದು ಸೀರೆ ಓದಿಸಿದಳು.

" ಈಗ ನನಗೇಕಕ್ಕಾ ಸೀರೆ."

" ತೌರುಮನೆಗೆ ಬಂದ ಮಗಳನ್ನು ಎಂಥಾ ಬಡವರೂ ಬರಿಗೈಯಲ್ಲಿ ಕಳಿಸಿಕೊಡುವುದಿಲ್ಲ ಸುಭದ್ರಾ "

ಎಂದು ಹೇಳಿ ಅವಳ ಕೈಯಲ್ಲಿ ಇಪ್ಪತ್ತೈದು ರೂಪಾಯಿಗಳನ್ನಿಟ್ಟು,

" ಮನೂಗೆ ನೀನೇ ಯಾವದಾದರೂ ಬಟ್ಟೆ ಹೊಲಸಿ ಹಾಕು " ಎಂದಳು.

# ೩೦

ಶಾಸ್ತ್ರಿಗಳ ಗೀತಾಪಾಠ ಅವಿಚ್ಛಿನ್ನವಾಗಿ ಸಾಗಿತ್ತು.

ಎರಡನೆಯ ತ್ರೈಮಾಸ ಮುಗಿಯುವ ವೇಳೆಗೆ ಅವರು „ಹನ್ನೆರಡು ಅಧ್ಯಾಯಗಳನ್ನು ಪೂರೈಸಿದ್ದರು.

" ಇನ್ನು ಉಳಿದಿರುವುದು ಆರು ಅಧ್ಯಾಯಗಳಲ್ಲವೇ ಶಾಸ್ತ್ರಿಗಳೇ "

ಎಂದು ಮೈಲಾರಯ್ಯ ಒಂದು ದಿನ ಕೇಳಿದ.

" ಹೌದು."

" ಇವು ಮುಗಿಯುವುದಕ್ಕೆ ಇನ್ನೆಷ್ಟು ದಿನವಾಗಬಹುದು."

" ಒಂದೆರಡು ತಿಂಗಳಲ್ಲೇ ಮುಗಿಸಬಹುದು–ಏಕೆ ?"

" ಚೈತ್ರಮಾಸದ ವೇಳೆಗೆ ಮುಗಿದರೆ ವಿವಾಹಪೂರ್ವ ' ಗೀತಾಮಂಗಳ ' ಮಾಡಬೇಕೆಂದು ನನ್ನ ಸಂಕಲ್ಪ."

" ಅಗತ್ಯವಾಗಿ ಆಗಲಿ "

" ಮುಂದೆ ಯಾವದನು ಆರಂಭಿಸುತ್ತೀರಿ ?"

" ಉಪನಿಷತ್ತುಗಳು. ಕಠದಿಂದಲೇ ಆರಂಭಿಸಬೇಕೆಂದಿದ್ದೇನೆ."

" ಹಾಗೇ ಮಾಡಿ–ಇನ್ನೊಂದು ವಿಷಯ....

" ಅಪ್ಪಣೆಯಾಗಲಿ."

" ರಂಗಣ್ಣನ ಮದುವೆಯ ಪೌರೋಹಿತ್ಯ ತಾವೇ ಒಪ್ಪಿಕೊಳ್ಳಬೇಕು."

" ನಾನು ಸಾಮಾನ್ಯವಾಗಿ....

" ಅದನ್ನು ನಾನು ಬಲ್ಲೆ ಶಾಸ್ತ್ರಿಗಳೇ. ನನ್ನ ವಿದ್ಯಾಗುರುಗಳಾದ ತಾವು ಇದನ್ನು ನಡೆಸಿಕೊಟ್ಟರೆ ನನಗೆ ಅಪಾರ ಸಂತೋಷವಾಗುತ್ತದೆ."

" ನಿಮ್ಮ ಇಚ್ಛೆಯಂತೆಯೇ ಆಗಲಿ."

" ತಮ್ಮ ಗೀತಾಪಾಠದಿಂದ ನನಗೆ ನಿಧಿ ದೊರೆತಿದೆ ಶಾಸ್ತ್ರಿಗಳೇ ?"

" ನಿಧಿಯೇ ?"

" ಹೂ–ಮನಃಶಾಂತಿ ! ಅದಕ್ಕಿಂತ ದೊಡ್ಡ ನಿಧಿ ಇದೆಯೇ ?"

"ಜ್ಞಾನಪಿಪಾಸುಗಳಾದ ನಿಮಗೆ ಪಾಠ ಹೇಳಿ ನಾನು ಧನ್ಯನಾದೆ ವೈಲಾರಯ್ಯ. ಭಗವದ್ಗೀತೆ ನಿಮಗೆ ಹೊಸದಾಗಿ ಏನೂ ಹೇಳಿಲ್ಲ—ಅಲ್ಲಿರುವ ತತ್ತ್ವಸಾರವೆಲ್ಲಾ ನಿಮ್ಮ ಹೃದ್ಗತವಾಗಿತ್ತು—ಸುಪ್ತವಾಗಿದ್ದ ಆ ಚೇತನವನ್ನು ಗೀತೆ ಜಾಗೃತಗೊಳಿಸಿತು. ಭಗವಂತ ಹದಿನೆಂಟನೆಯ ಅಧ್ಯಾಯದಲ್ಲಿ ಅಪ್ಪಣೆ ಕೊಡಿಸಿದ್ದಾನೆ,

'ಇದಂ ತೇ ನಾತಪಸ್ಕಾಯ
ನಾಭಕ್ತಾಯ ಕದಾಚನ
ನ ಚಾಶುಶ್ರೂಷವೇ ವಾಚ್ಯಂ
ನ ಚ ಮಾಂ ಯೋಭ್ಯಸೂಯತಿ'

ತಪಸ್ವಿಯಲ್ಲದವನಿಗೂ, ಭಕ್ತನಲ್ಲದವನಿಗೂ, ಕೇಳಲಿಚ್ಛೆಯಿಲ್ಲದವನಿಗೂ ಇದನ್ನು ಹೇಳಬೇಡ ಎಂದು ಭಗವಂತ ಎಚ್ಚರಿಕೆಯಿತ್ತಿದ್ದಾನೆ.—ನಿಮ್ಮ ಸಂಸ್ಕಾರ ದೊಡ್ಡದು—ಇತರರು ಅನೇಕ ವರ್ಷಗಳಲ್ಲಿ ಸಾಧಿಸಲಾಗದುದನ್ನು ಕೆಲವೇ ತಿಂಗಳಲ್ಲಿ ಸಾಧಿಸಿರುವಿರಿ."

"ಏನು ಸಾಧಿಸಿದ್ದೇನೆ ಶಾಸ್ತ್ರಿಗಳೇ—ಏನು ಸಾಧಿಸಿದ್ದೇನೆ. ನನ್ನ ಅಪರಿಮಿತ ಅಜ್ಞಾನವನ್ನು ನೆನಸಿಕೊಂಡರೆ ದುಃಖವಾಗುತ್ತದೆ. ಈ ಜನ್ಮದಲ್ಲಿ ನಾನು ಬೆಳಕು ಕಾಣುವೆನೇ ಎಂಬ ಅಧೈರ್ಯ ಮೂಡುತ್ತದೆ. ನನಗೆ ಕೆಲವು ಬಂಧನಗಳಿಲ್ಲದಿದ್ದರೆ ಕೆಲಸಕ್ಕೆ ರಾಜೀನಾಮೆ ಕೊಟ್ಟು ಅಧ್ಯಾತ್ಮ ಸಾಧನೆಗೇ ಎಲ್ಲಾ ಕಾಲವನ್ನೂ ವಿನಿಯೋಗಿಸುತ್ತಿದ್ದೆ."

"ಕೆಲಸಕ್ಕೆ ರಾಜೀನಾಮೆ ಕೊಟ್ಟು ನೀವು ಸಾಧನೆ ಮಾಡಬೇಕಾಗಿಲ್ಲ. ವೈಲಾರಯ್ಯನವರೇ. ಭಗವಂತ ಹೇಳಿರುವಂತೆ 'ಯೋಗಃ ಸುಕರ್ಮಸು ಕೌಶಲಂ' ಫಲಾಪೇಕ್ಷೆಯಿಲ್ಲದೆ ನಮ್ಮ ನಮ್ಮ ವೃತ್ತಿಗಳನ್ನು ಶ್ರದ್ಧೆಯಿಂದ ಅನುಸರಿಸುವುದೇ ಯೋಗ."

"ಫಲಾಪೇಕ್ಷೆಯಿಲ್ಲದೆ ವೃತ್ತಿಗಳನ್ನು ಅನುಸರಿಸುವುದು ಹೇಗೆ? ಕ್ರತು ಪೂರ್ಣವಾದ ವೃತ್ತಿಯಲ್ಲಿ ಫಲಾಪೇಕ್ಷೆ ವ್ಯಕ್ತಾವ್ಯಕ್ತವಾಗಿ ಸೇರಿಕೊಂಡಿಲ್ಲವೇ?"

"ಫಲಾಪೇಕ್ಷೆಯಿಲ್ಲದೆ ನಾವು ಬದುಕುವುದು ಹೇಗೆ—ಬದುಕದಿದ್ದರೆ ಸಾಧನೆ ಮುಂದುವರಿಸುವುದು ಹೇಗೆ ಎಂದು ಕೆಲವರು ಕೇಳುತ್ತಾರೆ. ಭಗವಂತ ಫಲ ಶಬ್ದಕ್ಕೆ ವಿಶಿಷ್ಟಾರ್ಥ ಕೊಟ್ಟಿದ್ದಾನೆ. ಜೀವಧಾರಣೆ ಮಾಡಲು ಅವಶ್ಯಕವಾದ ಅನ್ನ, ಮಾನ ಮುಚ್ಚಲು ಅಗತ್ಯವಾದಷ್ಟು ಬಟ್ಟೆ ಇವು ಫಲಗಳೆನಿಸಿಕೊಳ್ಳುವುದಿಲ್ಲ—

ಕೇವಲ ಆವಶ್ಯಕತೆಗಳು. ತನಗೆ ಅವಶ್ಯಕವಾದುದಕ್ಕಿಂತಲೂ ಹೆಚ್ಚಾಗಿ ಯಾವನು ಅಪೇಕ್ಷಿಸುತ್ತಾನೋ, ಸಂಗ್ರಹಿಸುತ್ತಾನೋ ಆಗವನು ಪ್ರಪಂಚಿಯಾಗುತ್ತಾನೆ. ಆ ದುರಾಶೆಯನ್ನು ಮನುಷ್ಯ ತ್ಯಜಿಸಬೇಕೆಂದು ಭಗವಂತನ ಸಂದೇಶ.–ವೃತ್ತಿಯಲ್ಲಿ ತಾವು ಅನುಸರಿಸುತ್ತಿರುವ ಮಾರ್ಗವೇ ಸಾಧನಮಾರ್ಗ. ಜಗತ್ತು ಮುನ್ನಡೆಯಲು ಸೂರ್ಯನೂ ಬೇಕು–ಚಂದ್ರನೂ ಬೇಕು; ಶಿಕ್ಷಕನೂ ಬೇಕು, ರಕ್ಷಕನೂ ಬೇಕು. ವಿಶ್ವಜೀವನವೇ ಒಂದು ಹೂಮಾಲೆಯಿದ್ದಂತೆ. ಮಾಲೆಯನ್ನು ಕಟ್ಟುವುದಕ್ಕೆ ನಾವು ಬಗೆಬಗೆಯ ಹೂಗಳನ್ನು, ಎಲೆಗಳನ್ನು ಉಪಯೋಗಿಸುತ್ತೇವೆ. ಆಯೆಲ್ಲ ಹೂಗಳು, ಎಲೆಗಳು ಒಟ್ಟುಗೂಡಿದ್ದರಿಂದಲೇ ಮಾಲೆ ಶೋಭಾಯಮಾನವಾಗುತ್ತದೆ. ಪ್ರತಿಯೊಬ್ಬ ಮಾನವ ಅವನ ವೃತ್ತಿ ಒಂದೊಂದು ಹೂವು, ಎಲೆಯಿದ್ದಂತೆ. ಅವುಗಳನ್ನು ಕೋದ ಮೇಲೆ ಭಗವಂತನ ಶ್ರೀಕಂಠಕ್ಕೆ ಅರ್ಪಿತವಾಗುತ್ತದೆ."

ಮೈಲಾರಯ್ಯನ ಕಣ್ಣುಗಳಿಂದ ಆನಂದಭಾಷ್ಪಗಳುದುರಿದವು.

ಶಾಸ್ತ್ರಿಗಳ ಮನೋಜ್ಞ ಉಪಮಾನವನ್ನು ಕುರಿತು ಚಿಂತಿಸುತ್ತಾ,

"ವೃತ್ತಿ, ಸತ್ಯವನ್ನು ಕೂಡಿಸುವುದು ಸಾಧ್ಯವೇ ಶಾಸ್ತ್ರಿಗಳೇ ?"

"ಸಾಧ್ಯ–ಕಷ್ಟಸಾಧ್ಯ–ನಮ್ಮ ಪ್ರತಿಯೊಂದು ನುಡಿ, ನಡೆಗೂ ಸತ್ಯವೇ ಒರೆಗಲ್ಲು. ಸತ್ಯಸಾಧಕ ಹಲವು ಎಡರು ತೊಡರುಗಳನ್ನು ಹಾಯಬೇಕಾಗುತ್ತದೆ. ಅವನ ತಪಸ್ಸನ್ನು ಭಂಗಗೊಳಿಸಲು ದೈತ್ಯಶಕ್ತಿಗಳು ಪ್ರಯತ್ನಿಸುತ್ತವೆ. ದೇವತೆಗಳು, ಋಷಿಗಳು ತಪಸ್ಸಿಗೆ ಕುಳಿತಾಗ ಅಸುರರು ಬಂದು ತಪಸ್ಸನ್ನು ಕೆಡಿಸುತ್ತಿದ್ದರು ಎಂದು ಪುರಾಣಗಳು ಹೇಳಿಲ್ಲವೇ–ಅದರ ತಾತ್ಪರ್ಯವೇ ಇದು. ದೈವಾಸುರ ಕಾಳಗ ಕೇವಲ ಪುರಾಣ ಘಟನೆಯಲ್ಲ–ನಿತ್ಯ ನಮ್ಮ ಅಂತರಂಗದಲ್ಲಿ ದೈವಾಸುರ ಕಾಳಗ ನಡೆಯುತ್ತಿರುತ್ತದೆ. ಭಗವದ್ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ಈ ವಿಷಯ ಕೂಲಂಕಷವಾಗಿ ಚರ್ಚಿಸಲ್ಪಟ್ಟಿದೆ. ಆಸುರೀ ಶಕ್ತಿಯೊಂದಿಗೆ ಸೆಣಸಿ ಅದನ್ನು ದಮನಿಸುವುದೇ ಯೋಗ."

ಮೈಲಾರಯ್ಯನ ಹೃದಯದಲ್ಲಿ ಮಿಡಿಯುತ್ತಿದ್ದ ಒಂದು ಅನುಮಾನ ಪರಿಹಾರವಾಗಿತ್ತು. ಅವನು ಪ್ರಸನ್ನವದನನಾಗಿ,

"ನನ್ನ ಕಣ್ಣುಮುಂದೆ ಸಾಲುಗಟ್ಟಿ ನಿಂತಿರುವ ಮಾಯೆಯ ತೆರೆಗಳು ಜಾರುತ್ತಿವೆ–'**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ**' ಎನ್ನುವ ಕಾಲ ಬೇಗ ಬರಲಿ ಎಂದು ತಾವು ಹರಸಬೇಕು" ಎಂದ.

ಶಾಸ್ತ್ರಿಗಳು ಗಂಭೀರವಾಗಿ 'ತಥಾಸ್ತು' ಎಂದರು.

# ೩೧

ರಂಗಣ್ಣನ ಮದುವೆಯ ದಿನ ಸಮೀಪಿಸಲು, ಅವನಿಗೆ, ಅವನ ಭಾವೀ ಪತ್ನಿಗೆ ಉಡುಗೊರೆ ಕೊಳ್ಳುವ ಬಗ್ಗೆ ಶಾಮುನ ಮನೆಯಲ್ಲಿ ದೊಡ್ಡ ಜಿಜ್ಞಾಸೆ ಎದ್ದಿತು.

ಗಂಡಿಗೆ ಒಂದು ಜತೆ ಪಂಚೆ, ಹೆಣ್ಣಿಗೊಂದು ರವಿಕೆ ಕಣ ಸಾಕು ಎಂದು ಶಾಮು ಸೂಚಿಸಿದ.

ಸುಭದ್ರ ತೃಪ್ತಳಾಗದೆ,

" ನನಗೆ ಇರುವವನು ಒಬ್ಬ ತಮ್ಮ–ನನ್ನ ತೌರು ಮನೆಯಲ್ಲಿ ಮೇಲಿಂದ ಮೇಲೆ ಮಂಗಳ ಕಾರ್ಯಗಳು ಆಗುವ ಸಂಭವವಿಲ್ಲ. ಈ ಸಮಯದಲ್ಲಿ ನಾವು ಕೈಹಿಡಿತ ಮಾಡಬಾರದು."

" ಏನು ಮಾಡಬೇಕೆಂದು ನಿನ್ನ ಅಪೇಕ್ಷೆ."

" ರಂಗಣ್ಣನಿಗೆ ಒಂದು ಜತೆ ಪಂಚೆ, ಒಂದು ಒಳ್ಳೆಯ ಕೋಟು ; ಶಾರದೆಗೆ ಒಂದು ಭಾರಿ ಸೀರೆ ಕೊಡಬೇಕು."

" ಅವನ ಮಾವನ ಮನೆಯವರು ಅನುಕೂಲವಾಗಿದ್ದಾರೆ. ಅವರು ಬೇಕಾದದ್ದು ಕೊಡುತ್ತಾರೆ "

" ಅವರು ಕೊಡುತ್ತಾರೆಂದು ನಾವು ಸುಮ್ಮನಿರುವುದೇ ?– ಅವರಿಗೆ ಸರಿ ಸಮನಾಗಿ ನಾವು ನಡೆದುಕೊಳ್ಳಬೇಡವೇ ?"

" ಹುಲಿ ನೋಡಿ ನರಿ ಬರೆ ಹಾಕಿಕೊಂಡಿತಂತೆ !"

" ................"

" ಹೆಣ್ಣಿಗೆ ಒಡವೆ, ವಸ್ತ್ರ ಇಡಬೇಕು. ಈ ಖರ್ಚನ್ನೆಲ್ಲಾ ನಮ್ಮಣ್ಣ ಪೂರೈಸುವುದಿಲ್ಲವೇ ? ಅವನೂ, ನಾನೂ ಇಬ್ಬರೂ–ಎರಡೆರಡು ಕೈಯಲ್ಲಿ ಖರ್ಚು ಮಾಡುವುದರಲ್ಲೇನರ್ಥ ?"

" ರಂಗಣ್ಣ ಜಾನಕಕ್ಕನಿಗೆ ಸ್ವಲ್ಪ ಹಣ ಕಳಿಸಿಕೊಡುತ್ತಾನೆ. ಅವರೇ ಒಡವೆ, ವಸ್ತ್ರ ಮಾಡಿಸುತ್ತಾರೆ. ಹಣ ಸಾಲದೆ ಬಂದರೆ ಜಾನಕಕ್ಕ ಹಾಕುತ್ತಾರೆ."

" ನಾನೇನು ಲಕ್ಷಾಧೀಶ್ವರ ಎಂದು ತಿಳಿದುಕೊಂಡಿದ್ದೀಯಾ ?"

" ಇಂಥ ಸಮಯದಲ್ಲೂ ನಾವು ನಮ್ಮ ವಿಷಯವನ್ನೇ ಯೋಚಿಸುತ್ತ ಕುಳಿತರಾಗುತ್ತದೆಯೇ ?"

" ಇಲ್ಲ–ಇರುವ ನಾಲ್ಕು ಕಾಸನ್ನು ಊರಿನವರಿಗೆ ಹಂಚಿಬಿಡು–ನಾನು ತಿರುಪೆ ಬೇಡುವುದಕ್ಕೆ ಹೋಗುತ್ತೇನೆ."

" ಹೋಗಲಿ–ನನ್ನದು ಯಾವದಾದರೊಂದು ಒಡವೆ ತೆಗೆದುಕೊಂಡು ಹೋಗಿ ಮಾರಿ, ಉಡುಗೊರೆ ತನ್ನಿ."

ಹೆಂಡತಿಯು ಸಲಹೆ ಕೇಳಿ ಕೋಪೋದ್ದೀಪಿತನಾದ ಶಾಮು,

" ನಿಮ್ಮಪ್ಪನ ಮನೆಯಿಂದ ಆನೆ ಒಂಟೆಗಳ ಮೇಲೆ ಜವಾಹಿರಿ ಹೊರೆಸಿ ಕೊಂಡು ಬಂದಿದ್ದೀ–ಅದನ್ನೆ ಈಗ ಧಾರಾಳವಾಗಿ ಖರ್ಚು ಮಾಡುವುದಕ್ಕೆ ಹೊರಟಿದ್ದೀಯಲ್ಲವೇ? ನಾನು ನಿನ್ನ ತಮ್ಮನಿಗೆ ಕೊಡುವುದು ಒಂದು ಜತೆ ಪಂಚೆ– ಬೇಕಾದರೆ ಅವನು ತೆಗೆದುಕೊಳ್ಳಲಿ, ಸಾಕಾದರೆ ಬಿಡಲಿ " ಎಂದ

ಗಂಡನ ಕಾರ್ಪಣ್ಯಬುದ್ಧಿ ಕಂಡು ಬೇಸರಗೊಂಡಿದ್ದ ಸುಭದ್ರಾ, ಅಳುತ್ತ,

" ಯಾವತ್ತಿಗೂ ನಿಮ್ಮ ಹಣೆಯಬರಹ ಒಂದೇ ಆಯಿತು. ನಿಮಗೆ ಹಣ ಒಂದಿದ್ದರೆ ಯಾವದೂ ಬೇಕಿಲ್ಲ–ಯಾರೂ ಬೇಕಿಲ್ಲ "

ಎನ್ನಲು ತಾಳ್ಮೆಗೆಟ್ಟ ಶಾಮು ಅವಳನ್ನು ಹಿಡಿದು ಥಳಿಸಿದ. ಸುಭದ್ರಾ ಅಳುತ್ತ ಒಳಗೆ ಹೋಗಿಬಿಟ್ಟಳು.

ಕೆಲವು ದಿನಗಳಲ್ಲಿ ವಿವಾಹಸನ್ನದ್ಧನಾಗಿ ರಂಗಣ್ಣ ಬರಲು, ಸುಭದ್ರಾ, ಶಾಮು ಅವನ ಜತೆ ಶಿವಮೊಗ್ಗೆಗೆ ಹೊರಟರು.

ಜಾನಕಮ್ಮ ವಧುವಿಗೆ ನಾಲ್ಕು ಸೀರೆ ಕೊಂಡು, ಎರಡು ಜತೆ ಬಳೆ, ಮೂರೆಳೆ ಸರ ಮಾಡಿಸಿದ್ದಳು.

ನರಸಿಂಹ ಶ್ರೋತ್ರಿ ತಂಗಿಗೆ ವಜ್ರದೋಲೆ, ಎರಡು ಜತೆ ಬಳೆ, ಕೆಂಪಿನ ಸರ ಮಾಡಿಸಿದ್ದ.

ಶಾಮು ತನ್ನ ಹಟವನ್ನೇ ಸಾಧಿಸಿದ್ದ.

ಮೂರು ದಿವಸ ವಿಜೃಂಭಣೆಯಿಂದ ವಿವಾಹ ನೆರವೇರಿತು.

ಪೌರೋಹಿತ್ಯ ವಹಿಸಿದ್ದ ನರಹರಿಶಾಸ್ತ್ರಿಗಳು ಯಾವ ನ್ಯೂನತೆಯೂ ಬರದಂತೆ ಶಾಸ್ತ್ರಭಾಗವನ್ನು ಸಾಂಗವಾಗಿ ಪೂರೈಸಿದ್ದರು.

ಮದುವೆಗೆ ಬಂದಿದ್ದ ಅತಿಥಿಗಳು ಒಬ್ಬೊಬ್ಬರಾಗಿ ಊರಿಗೆ ಹೊರಟರು.

ರಂಗಣ್ಣ, ಶಾಮು, ಸುಭದ್ರನೂ ಹೊರಡಲನುವಾಗಲು ಜಾನಕಮ್ಮ,

"ಈಗ ನೀನು ಹೋಗಬೇಡ–ಸುಭದ್ರಾ–ನಿನ್ನ ಬಾಣಂತನ ಮುಗಿಸಿಕೊಂಡು ಹೋಗುವೆಯಂತೆ" ಎಂದಳು.

"ಅವರು ಒಪ್ಪಬೇಕಲ್ಲಾ ಅಕ್ಕಾ."

"ಅವನಿಗೆ ನಾನೂ ಹೇಳುತ್ತೇನೆ–ನಿಮ್ಮ ಭಾವನವರ ಕೈಯಲ್ಲೂ ಹೇಳಿಸುತ್ತೇನೆ" ಎಂದಳು.

ಅಣ್ಣ, ಅತ್ತಿಗೆ ಮಾತು ತೆಗೆದುಹಾಕಲಾರದೆ ಶಾಮು, ಸುಭದ್ರೆಯನ್ನು ಶಿವಮೊಗ್ಗೆಯಲ್ಲಿ ಬಿಡಲು ಒಪ್ಪಿಕೊಂಡ.

ಪ್ರಯಾಣಸನ್ನದ್ಧನಾದ ಗಂಡನ ಬಳಿಗೆ ಬಂದ ಸುಭದ್ರಾ, ಕಂಬನಿದುಂಬಿ,

"ಯಾವಾಗ ಬರುವಿರಿ ?"

"ನಿನ್ನ ಮೈಕಳೆದ ಮೇಲೆ ಬರುತ್ತೇನೆ."

"ನಿಮ್ಮ ಆರೋಗ್ಯ ಚೆನ್ನಾಗಿ ನೋಡಿಕೊಳ್ಳಿ"

"ಆಗಲಿ."

"ಹೋಟೆಲಿನಿಂದ ಸಾರು, ಹುಳಿ ತರಿಸಿಕೊಳ್ಳಬೇಡಿ. ಒಂದು ಕುಕರ್ (Cooker) ತೆಗೆದುಕೊಂಡು ನೀವೇ ಅಡಿಗೆಮಾಡಿಕೊಳ್ಳಿ."

"ಕುಕರ್ ಎಂದರೆ ನಲವತ್ತು ಐವತ್ತು ರೂಪಾಯಿ ಕುಕ್ಕಬೇಕಾಗುತ್ತದೆ."

"ಹೋದರೆ ಹೋಗಲಿ–ನಿಮ್ಮ ಆರೋಗ್ಯಕ್ಕಿಂತ ಯಾವದು ದೊಡ್ಡದು."

"..............."

"ನಾನು ಅಲ್ಪಳು–ಅವಿದ್ಯಾವಂತಳು. ಆದರೆ ನನಗೆ ತಿಳಿದಿರುವ ಒಂದು ಮಾತು ಹೇಳುತ್ತೇನೆ. ಕೇಳುವಿರಾ ?"

"ಏನು ?"

"ನೀವು ಕೋಪಮಾಡಿಕೊಳ್ಳುವುದಿಲ್ಲವೆಂದರೆ ಹೇಳುತ್ತೇನೆ."

"ಹೇಳು."

"ಕೋಪ ಕಡಿಮೆ ಮಾಡಿ. ನೀವೇ ನನ್ನ ಮೇಲೆ ಮಾತು ಮಾತಿಗೆ ಕೋಪಿಸಿಕೊಂಡರೆ ನನಗೆ ಯಾರು ದಿಕ್ಕು ?"

"ನನಗೆ ಕೋಪ ಬರುವಂತೆ ಮಾಡುವುದು ನಿನ್ನ ತಪ್ಪು."

"ಮನೆಗೆ ಸಾಮಾನು, ಸರಂಜಾಮು ಬೇಕೆಂದು ಹೇಳುವುದೂ ತಪ್ಪೇ ?"

"ದುಂದುವೆಚ್ಚ ಮಾಡುವುದು ಸರಿಯಲ್ಲ."

"ನಾವು ಹೊಟ್ಟೆತುಂಬ ಊಟಮಾಡಬೇಡವೇ ?"

"ನಿನ್ನನ್ನು ಉಪವಾಸ ಕೆಡವಿದ್ದೇನೆಯೇ ?"

" ನಾಳೆ ನಾನಾಗಲಿ, ಮಗುವಾಗಲಿ ಕಾಹಿಲೆಬಿದ್ದರೆ ನಿಮಗೇ ತೊಂದರೆ– ಅನವಶ್ಯಕ ಖರ್ಚು."

" ನೀನು ಬಡವನನ್ನು ಮದುವೆಯಾಗಿರುವ ವಿಷಯ ಮರೆಯಬೇಡ. ನಾವು ಹಾಸಿಗೆಯಿದ್ದಷ್ಟು ಕಾಲುಚಾಚಿಕೊಳ್ಳಬೇಕು. ಇತರರು ಕುಣಿಯುತ್ತಾರೆಂದು ನಾವೂ ಕುಣಿದರೆ ಸೊಂಟ ಮುರಿದುಹೋದೀತು."

" ನಾನು ಹೇಳುವುದು ಹೇಳಿದ್ದೇನೆ–ಇದರ ಮೇಲೆ ನಿಮ್ಮ ಇಷ್ಟ "

ಎಂದು ಸುಭದ್ರಾ ನಿರಾಶೆಗೊಂಡು ನುಡಿದಳು.

## ೩೭

'ಗೀತಾಪಾಠ' ಮುಗಿಸಲು ಮೈಲಾರಯ್ಯ ಮಂಗಳವನ್ನಾಚರಿಸಿ, ನರಹರಿ ಶಾಸ್ತ್ರಿಗಳಿಗೂ, ಅವರ ಕುಟುಂಬಕ್ಕೂ ಉಡುಗೊರೆ ಸಂಭಾವನೆ ಸಮರ್ಪಿಸಿದ.

ಮಂಗಳ ಮುಗಿದ ಮೂರನೆಯ ದಿನವೇ ಸುಭದ್ರೆಗೆ ನೋವು ಕಾಣಿಸಿ ಕೊಂಡಿತು.

ಅವಳು ಐದು ದಿವಸ ಸತತವಾಗಿ ನೋವು ಅನುಭವಿಸಿ ಗಂಡುಮಗುವನ್ನು ಪ್ರಸವಿಸಿದಳು.

ನಾಮಕರಣಕ್ಕೆ ಬರಬೇಕೆಂದು ಮೈಲಾರಯ್ಯ ತಮ್ಮನಿಗೆ ಬರೆದ.

"ಶಾಲೆಯಲ್ಲಿ ಪರೀಕ್ಷೆ ನಡೆಯುತ್ತಿದೆ ಈಗ ಬರಲಾಗುವುದಿಲ್ಲ"

ಎಂದು ಶಾಮ ತಿಳಿಸಿದ.

ಅನಿವಾರ್ಯವಾಗಿ ನಾಮಕರಣ ಮುಂದುವರಿಸಬೇಕಾಯಿತು.

ಜಾನಕಮ್ಮ ಪ್ರೀತಿಪುರಸ್ಸರವಾಗಿ ಮಗುವಿಗೆ 'ಜಗನ್ನಾಥ' ಎಂದು ಹೆಸರಿಟ್ಟಳು.

ಸೋದರಳಿಯನನ್ನು ನೋಡಿಹೋಗಲು ಬಂದ ರಂಗಣ್ಣನ 'ಪ್ರಸ್ಥದ ಶಾಸ್ತ್ರ'ವೂ ಏರ್ಪಾಡಾಯಿತು.

ಒಂದು ವಾರ ಶಿವಮೊಗ್ಗೆಯಲ್ಲಿಯೇ ಉಳಿದ ರಂಗಣ್ಣ, ಹೆಂಡತಿಯನ್ನು ಕರೆದುಕೊಂಡು ಊರಿಗೆ ಪ್ರಯಾಣ ಬೆಳೆಸಿದ.

ಜಾನಕಮ್ಮನೇ ಬಾಣಂತನದ ಜವಾಬ್ದಾರಿ ಹೊತ್ತುಕೊಂಡಳು.

ಶಾಸ್ತ್ರಿಗಳು 'ಕಠೋಪನಿಷತ್ ಪಾಠ' ಆರಂಭಿಸಿದರು.

ಜಗನ್ನಾಥನಿಗೆ ಮೂರನೆಯ ತಿಂಗಳು ನಡೆಯುತ್ತಿದ್ದಾಗ, ಶಾಮ ಬಂದು ಹೆಂಡತಿ ಮಕ್ಕಳನ್ನು ಬೆಂಗಳೂರಿಗೆ ಕರೆದೊಯ್ದ.

ಜಾನಕಮ್ಮನ ಮನೆ-ಮನಸ್ಸು ಮತ್ತೆ ಬರಿದಾಯಿತು.

ಅವಳಿಗೂ 'ಕಠೋಪನಿಷತ್ತೇ' ಆಶ್ರಯಸ್ಥಾನವಾಯಿತು.

ಒಂದು ದಿನ ಮೈಲಾರಯ್ಯ ಕಛೇರಿಯಲ್ಲಿ ಕುಳಿತು ತನ್ನ ನಿತ್ಯಗೆಲಸ ನಿರ್ವಹಿಸುತ್ತಿದ್ದ.

ಬೆಂಗಳೂರಿನಿಂದ ಒಂದು ಟ್ರಂಕ್‌ಕಾಲ್ (Trunk call) ಬರಲು, ರಿಸೀವರನ್ನು ಕೈಗೆತ್ತಿಕೊಂಡ.

ಐ. ಜಿ. ಸಾಹೇಬರ ಆಫೀಸಿನ ಮ್ಯಾನೇಜರು ಕಾಲ್ ಮಾಡಿದ್ದರು.

" ಸೋಲೂರು ಭರಮೇಗೌಡನಿಗೆ ಸಂಬಂಧಪಟ್ಟ ಕಾಗದಗಳು ನಿಮ್ಮಲ್ಲಿ ಯಾವದಾದರೂ ಇದ್ದರೆ ಬೇಕಾಗಿತ್ತು ಸಾರ್."

" ಯಾಕೆ ಮ್ಯಾನೇಜರೇ–ಈಚಿಗೇನಾದರೂ ನಡೆದಿದೆಯೇ ?"

" ನಿಮಗೆ ಗೊತ್ತಿಲ್ಲವೇ ?"

" ಇಲ್ಲ."

" ಭರಮೇಗೌಡ ತನ್ನ ಶಿಕ್ಷಾವಧಿ ಕಳೆದು ಖುಲಾಸೆ ಹೊಂದಿದ."

" ಖುಲಾಸೆಯಾದಮೇಲೆ ಎಲ್ಲಿಗೆ ಹೋದ?"

" ಸೋಲೂರಿಗೆ ಹೋಗಿ, ಎರಡೇ ದಿನಗಳಲ್ಲಿ ಹೆಂಡತಿ ಚೆನ್ನಮ್ಮನನ್ನು ಮಚ್ಚಿನಿಂದ ತುಂಡು ತುಂಡಾಗಿ ಕತ್ತರಿಸಿ, ತಾನೇ ಸ್ಟೇಷನ್ನಿಗೆ ಹೋಗಿ ಸರೆಂಡರ್ (Surrender) ಆದ."

" ಅಯ್ಯೋ–ಎಂಥಾ ಅನ್ಯಾಯ ! ನಾವೆಲ್ಲಾ ಇದ್ದುಕೊಂಡು ಆ ಹೆಂಗ ಸನ್ನು ಸಂರಕ್ಷಿಸಲಾಗಲಿಲ್ಲ ! ನನ್ನಲ್ಲಿ ಹೆಚ್ಚು ಪೇಪರ್ಸ್ (Papers) ಇಲ್ಲ ಮ್ಯಾನೇಜರೇ–ಹಿಂದೆ ಚೆನ್ನಮ್ಮನಿಂದ ಒಂದು ಸ್ಟೇಟ್‌ಮೆಂಟ್ (Statement) ತೆಗೆದುಕೊಂಡಿದ್ದೆ–ಅದನ್ನು ಕಳಿಸಿಕೊಡುತ್ತೇನೆ."

" ಒಳ್ಳೆಯದು ಸಾರ್–ಎಲ್ಲಾ ಕ್ಷೇಮವಷ್ಟೆ !"

" ಚೆನ್ನಾಗಿದ್ದೇನೆ– ನೀವು."

" ನಾನೂ ಚೆನ್ನಾಗಿದ್ದೇನೆ ಸಾರ್."

" ಇನ್ನೇನು ಆಫೀಸ್ ಸಮಾಚಾರ."

" ತಮ್ಮನ್ನು ಹುಬ್ಬಳ್ಳಿಗೆ ಟ್ರಾನ್ಸ್‌ಫರ್ ಮಾಡುವ ಹಾಗೆ ಕಾಣುತ್ತೆ ಸಾರ್."

" ಏಕೆ ?"

" ಶಿವಮೊಗ್ಗೆಯ ಪುಢಾರಿಗಳೊಬ್ಬರು ವಿಶ್ವಪ್ರಯತ್ನ ಮಾಡುತ್ತಿದ್ದಾರೆ."

" ಯಾರಿಗೂ ನಾನು ಅನ್ಯಾಯ ಮಾಡಿಲ್ಲವಲ್ಲ ಮ್ಯಾನೇಜರೇ."

" ನೀವಿನ್ನೂ ನ್ಯಾಯ–ಅನ್ಯಾಯದ ಮಾತು ಆಡ್ತಾ ಇದ್ದೀರಿ. ನೀವು ಅಲ್ಲಿರುವುದರಿಂದ ಪುಢಾರಿಗಳ ಬೇಳೆ ಬೆಯ್ಯುತ್ತಿಲ್ಲ. ಆವರು ನಿಮ್ಮನ್ನು ಬೇರೆ

ಕಡೆ ಕಳಿಸಿ, ತಮ್ಮವರೊಬ್ಬರನ್ನು ಶಿವಮೊಗ್ಗೆಗೆ ಕರೆಸಿಕೊಳ್ಳುವ ಏರ್ಪಾಟು ಮಾಡುತ್ತಿದ್ದಾರೆ ”

“ ಸನ್ನ ಸ್ಥಾನಕ್ಕೆ ಬರುವವರು ಯಾರು ?”

“ ಸೋಮಯ್ಯನವರು.”

“ ಸರಿ–ಹಾಗಾದರೆ ”

ಎಂದು ರಿಸೀವರ್ ಕೆಳಗಿಟ್ಟ.

ಅಂದು ಕಿವಿಯ ಮೇಲೆ ಬಿದ್ದಿದ್ದ ಎರಡು ಅಹಿತ ಸುದ್ದಿಗಳು ಮೈಲಾರಯ್ಯನ ಮನಸ್ಸನ್ನು ಕದಡಿಬಿಟ್ಟಿದ್ದವು.

‘ ಶಿವಮೊಗ್ಗೆಯಾದರೇನು, ಹುಬ್ಬಳ್ಳಿಯಾದರೇನು ?’

ಎಂದವನು ಮನಸ್ಸಿಗೆ ಸಮಾಧಾನ ತಂದುಕೊಳ್ಳಲೆತ್ನಿಸಿದ.

ಆದರೆ ಶಾಸ್ತ್ರಿಗಳ ಪಾಠಕ್ಕೆ ಅಡಚಣೆಯುಂಟಾಯಿತಲ್ಲಾ ಎಂಬ ಕೊರಗು, ಅವನನ್ನು ದುಃಖಿಯನ್ನಾಗಿ ಮಾಡಿತು.

## ೩೩

ಕಾಲಚಕ್ರ ತನ್ನ ನಿಯತಗತಿಯಲ್ಲಿ ಉರುಳುತ್ತಲೇ ಇತ್ತು.

ರಂಗಣ್ಣನ ಸಂಸಾರ ನವಪಲ್ಲವದಂತೆ ನಳನಳಿಸುತ್ತಿತ್ತು. ದೊಡ್ಡ ಸಂಸಾರದಲ್ಲಿ ಬೆಳೆದು, ಸಮಸ್ತ ಕೆಲಸ ಕಾರ್ಯಗಳಲ್ಲಿಯೂ ಪ್ರವೀಣೆಯಾಗಿದ್ದ ಶಾರದಮ್ಮ, ಅಂಬಮ್ಮನವರ ಸ್ಥಾನವನ್ನು ಅಚ್ಚುಕಟ್ಟಾಗಿ ಅಲಂಕರಿಸಿದಳು.

ಅವಳ ಪೂಜೆ, ಪುರಸ್ಕಾರ, ಆದರಾತಿಥ್ಯ ಕಂಡ ಊರ ಮುತ್ತೈದೆಯರು ಸುಪ್ರೀತರಾಗಿ,

"ಅಂಬಮ್ಮನವರು ಇಲ್ಲವೆನ್ನುವ ದುಃಖವನ್ನು ಮರೆಸಿಬಿಟ್ಟೆ ಕಣೇ ತಾಯಿ"

ಎಂದು ಹಾಡಿ ಹೊಗಳಿದರು.

ಮೈಲಾರಯ್ಯ ಹುಬ್ಬಳ್ಳಿ ಸೇರಿ ಎರಡು ವರ್ಷಗಳಾಗಿದ್ದವು.

ಜಾನಕಮ್ಮ ಆಗಾಗ್ಗೆ ಕಾಗದ ಒರೆದು ಶಾರದೆಯ ಯೋಗಕ್ಷೇಮ ವಿಚಾರಿಸುತ್ತಿದ್ದಳು

ಒಂದು ಸಲ ಬೆಂಗಳೂರಿಗೆ ಹೋಗಿ ಬಂದ ರಂಗಣ್ಣ ಎಲ್ಲರ ಯೋಗಕ್ಷೇಮ ತಿಳಿಸಿ,

"ಇನ್ನೊಂದು ವಿಷಯ ಹೇಳಬೇಕಾಗಿದೆ ಶಾರದಾ" ಎಂದ.

"ಏನು ಹೇಳಿ."

"ಸುಭದ್ರಾ ಮತ್ತೆ ಬಸುರಿ."

"ಪಾಪ! ಅವರು ಹೇಗೆ ಪೂರೈಸುತ್ತಾರೇಂದ್ರೆ–ನಿಮ್ಮ ಭಾವನವರು ಏನು ಏರ್ಪಾಟು ಮಾಡಿದ್ದಾರೆ?"

"ಏನೂ ಮಾಡಿಲ್ಲ. ಏನು ಮಾಡುವುದು ಎಂದು ಅವನು ನನ್ನನ್ನೇ ಕೇಳಿದ."

"ಇಲ್ಲಿಗೆ ಕರೆದುಕೊಂಡು ಬಂದುಬಿಡಿ–ನಾನು ನೋಡಿಕೊಳ್ಳುತ್ತೇನೆ."

" ನೀನೇ ಚಿಕ್ಕವಳು...."

" ತೌರುಮನೆಯಲ್ಲಿ ನಾನು ನೋಡಿದ್ದೇನೆ. ಶಾನುಭೋಗರ ಹೆಂಡತಿ ತಿಪ್ಪಮ್ಮನವರ ಸಹಾಯ ತೆಗೆದುಕೊಳ್ಳುತ್ತೇನೆ. ಎರಡು ಮಕ್ಕಳನ್ನು ಕಟ್ಟಿಕೊಂಡು ಸುಭದ್ರಾ ತನ್ನ ಬಾಣಂತನ ತಾನೇ ಮಾಡಿಕೊಳ್ಳುವುದಕ್ಕಾಗುತ್ತದೆಯೇ ?"

"ಪಾಪ–ಸುಖವಾಗಿ ಬೆಳೆದವಳು ನೀನು–ಒಮ್ಮೆಲೇ ಎಲ್ಲ ಜವಾಬ್ದಾರಿಯೂ ನಿನ್ನ ಹೆಗಲಮೇಲೆ ಬಿತ್ತು. ಅಪ್ಪ ಬದುಕಿದ್ದರೆ ನಿನ್ನನ್ನೂ ನೋಡಿ ಎಷ್ಟು ಸಂತೋಷಪಡುತ್ತಿದ್ದರೋ ?"

" ಅಂಥ ಅತ್ತೆಯನ್ನಿಟ್ಟುಕೊಳ್ಳುವ ಭಾಗ್ಯ ನನಗಿಲ್ಲ. ಊರಿಗೆ ಊರೇ ಅವರಿಗೆ ಕೈಯೆತ್ತಿ ಮುಗಿಯುತ್ತೆ. ಅವರ ಹೆಸರು ಹೇಳಿ ದೀಪ ಹಚ್ಚಿಯೇ ನಾನು ಎಲ್ಲಾ ಕೆಲಸ ಮಾಡುತ್ತೇನೆ. ಅವರೇ ನನ್ನ ಬೆನ್ನು ಕಾಯುತ್ತಿದ್ದಾರೆ."

" ಸುಭದ್ರನನ್ನು ನೋಡಿದರೆ ನನ್ನ ಕರುಳು ಕತ್ತರಿಸುತ್ತದೆ ಶಾರದಾ."

" ............... "

" ಅವಳ ದುಃಖ ದೇವರಿಗೇ ಪ್ರೀತಿಯಾಗಬೇಕು."

" ............... "

" ಮೈಲಾರಯ್ಯನವರು, ಚಾನಕಮ್ಮ ದೇವರಂಥ ಮನುಷ್ಯರು. ಅವರ ಗುಣದಲ್ಲಿ ಒಂದಂಶವಾದರೂ ಶಾಮುನಿಗೆ ಬರಬೇಡವೆ ?–ಸುಭದ್ರಾ ನಿನ್ನ ಹತ್ತಿರ ಏನಾದರೂ ಹೇಳಿದ್ದಾಳೇನು ?"

" ಇಲ್ಲ–ಅತ್ತಿಗೆಮ್ಮ ಒಡಪೆಟ್ಟಿಗೆ ಬಾಯಿಬಿಡುವವರಲ್ಲ–ಆದರೆ ಅವರು ಸುಖವಾಗಿಲ್ಲ ಎನ್ನುವುದು ನನಗೆ ಗೊತ್ತಾಯಿತು. ರಾಮಾಯಣ ಓದಿದವರು–ತಿಳಿದವರು–ಅವರೇಕೆ ಹೀಗೆ ಮಾಡುತ್ತಾರೆ."

" ಹೆಂಡತಿ ಮಕ್ಕಳಿಗೆ ಹೊಟ್ಟೆ ತುಂಬ ಅನ್ನ ಹಾಕುವುದಕ್ಕೆ ಶಾಮು ಬಡಕೊಳ್ಳುತ್ತಾನಲ್ಲಾ !"

" ನೋಡಿ–ನಾನೊಂದು ಮಾತು ಹೇಳುತ್ತೇನೆ. ವರ್ಷಾಕಾಲ ಅವರ ಮನೆಗಾಗುವಷ್ಟು ಅಕ್ಕಿ ಕಳಿಸಿಕೊಡಿ. ನಾನೂ ಚೂರೂ ಪಾರೂ ಸಾಮಾನು ಕಳಿಸುತ್ತಿರುತ್ತೇನೆ. ನೀವು ಅಕ್ಕನ ಕೈ ಸೇರುವ ಹಾಗೆ ಆಗಾಗ್ಗೆ ಸ್ವಲ್ಪ ಹಣ ಕೊಡುತ್ತಿರಿ."

" ನಾನು ಬೆಂಗಳೂರಿಗೆ ಹೋದಾಗ ಅವಳ ಕೈಗೆ ಸ್ವಲ್ಪ ಹಣ ಕೊಟ್ಟು ಬರುತ್ತೇನೆ. ಅದನ್ನು ತೆಗೆದುಕೊಳ್ಳುವುದಕ್ಕೂ ಅವಳಿಗೆ ಸಂಕೋಚ–ಗಂಡ ಎಲ್ಲಿ ತಪ್ಪು ಭಾವಿಸುತ್ತಾನೆಯೋ ಎಂದು ಭಯ."

" ಏನೋ–ನನಗೊಂದೂ ಅರ್ಥವಾಗುವುದಿಲ್ಲ. ಇರುವ ನಾಲ್ಕು ದಿನ

ದೇವರು ಕೊಟ್ಟಿದ್ದನ್ನು ಉಂಡುಕೊಂಡು ಸುಖವಾಗಿರದೆ, ಇಲ್ಲದ ಕಾಸ್ಟವ್ಯಸನ ಜನ ಏಕೆ ಹಚ್ಚಿಕೊಳ್ಳುತ್ತಾರೋ ?"

"ಕರ್ಮ !"

"ಕರ್ಮ ಎಂದರೇನು ?"

"ಏನೋ ಎಂತೋ ಯಾರಿಗೆ ಗೊತ್ತು–ಎಲ್ಲರೂ ಅನ್ನುತ್ತಾರೆ, ನಾನೂ ಅನ್ನುತ್ತೇನೆ"

ಎಂದು ರಂಗಣ್ಣ ನಕ್ಕ.

ರಂಗಣ್ಣ ಬೆಂಗಳೂರಿಗೆ ಹೋಗಿ ಅಕ್ಕನನ್ನು ಕರೆತರುವಷ್ಟರಲ್ಲಿಯೇ ಶಾಮನೇ ಸುಭದ್ರೆಯನ್ನೂ ಮಕ್ಕಳನ್ನೂ ಕರೆತಂದು ಸೋಲೂರಿನಲ್ಲಿ ಬಿಟ್ಟು ಹೋದ.

ತನ್ನ ಅಸಹಾಯಕ ಸ್ಥಿತಿ ನೆನೆದು ಸುಭದ್ರಾ ಗೋಳಾಡಿದಳು.

ಏನೂ ಅರಿಯದ ಮಗುವಿನಂತಿದ್ದ ಶಾರದೆಯ ಕೈಯಲ್ಲಿ ಬಾಣಂತನ ಮಾಡಿಸಿಕೊಳ್ಳಬೇಕಲ್ಲಾ ಎಂದವಳು ಮಮ್ಮಲ ಮರುಗಿದಳು.

ಅತ್ತಿಗೆಯನ್ನು ಸಂತೈಸುತ್ತಾ ಶಾರದಾ ಒಂದು ದಿನ,

"ನೀವು ಹೀಗೆ ಭಾವಿಸುವುದು ನ್ಯಾಯವಲ್ಲ ಅತ್ತಿಗೆ ನಿಮ್ಮ ತಮ್ಮಂದಿರು, ನಾನು ಹೊರಗಿನವಳೇ. ಈ ಮನೆಗೆ ನಾನು ನಿನ್ನೆ ಮೊನ್ನೆ ಬಂದವಳು–ನೀವು ಈ ಮನೆಯ ಹೆಣ್ಣುಮಗಳು. ನೀವು ಕಣ್ಣಲ್ಲಿ ನೀರು ಹಾಕುವುದು ತರವಲ್ಲ."

"ಅಕ್ಕ–ದೊಡ್ಡವಳು ಎನಿಸಿಕೊಂಡ ನಾನು ನನ್ನ ತಮ್ಮನನ್ನೂ ನಿನ್ನನ್ನೂ ಕೂಡಿಸಿ ಶುಶ್ರೂಷೆ ಮಾಡಬೇಡವೇನೇ ಶಾರದಾ–ಅಮ್ಮ, ಅಣ್ಣ ಹೋದ ಮೇಲೆ ರಂಗಣ್ಣ ಅನಾಥನಾದ. ಆಗಲೂ ನಾನು ಅವನಿಗೆ ಏನೂ ಮಾಡಲಾಗಲಿಲ್ಲ–ಅವನೇ ದುಡಿದು ಆಸ್ತಿ ಉಳಿಸಿಕೊಂಡು, ಒಬ್ಬ ಮನುಷ್ಯನಾದ. ಅವನನ್ನು ನಾನು ಕಿತ್ತುಕೊಂಡು ತಿನ್ನುತ್ತಿದ್ದೇನೆ"

"ಸುಮ್ಮನಿರಿ ಅತ್ತಿಗೆ–ಏನು ಮಾತು! ನೀವು ಗಂಡಾಗಿ ಹುಟ್ಟಿದ್ದರೆ ನಿಮ್ಮ ತಮ್ಮ ಆಸ್ತಿಯನ್ನು ಹಂಚಿಕೊಡುತ್ತಿರಲಿಲ್ಲವೆ ? ನಮ್ಮ ಮಾವನವರು ಸಂಪಾದಿಸಿಟ್ಟಿರುವ ಆಸ್ತಿಯಲ್ಲಿ ನಿಮಗೆ ಹಕ್ಕೇ ಇಲ್ಲವೇ ?"

ಶಾರದೆಯನ್ನಪ್ಪಿಕೊಂಡ ಸುಭದ್ರಾ, ಕಣ್ಣೀರು ಸುರಿಸುತ್ತಾ,

"ನಿನ್ನ ಹೆತ್ತ ಮಹಾತಾಯಿಯ ಹೊಟ್ಟೆ ತಣ್ಣಗಿರಲಿ–ನೀನು ಯಾವುದೋ ಜನ್ಮದಲ್ಲಿ ನನ್ನ ಮಗಳಾಗಿದ್ದೆ ಶಾರದಾ–ಆ ಋಣ ಈಗ ತೀರಿಸುತ್ತಾ ಇದ್ದೀ" ಎಂದಳು.

## ೩೪

ರಂಗಣ್ಣನಿಂದ ಬಂದ ತಾರನ್ನು ಜಾನಕಮ್ಮನೇ ಸ್ವೀಕರಿಸಿ, ಒಡೆದು ನೋಡಿ ಗಂಡನ ಕೈಗಿತ್ತಳು.

'ಸುಭದ್ರಾ ಪ್ರಸವಿಸಿದಳು–ಹೆಣ್ಣುಮಗು–ಮಗು ಬಾಣಂತಿ ಆರೋಗ್ಯ ವಾಗಿದ್ದಾರೆ.'

ತಾರು ನೋಡಿ ಸಂತಸಗೊಂಡ ಮೈಲಾರಯ್ಯ,

"ದೇವರು ದೊಡ್ಡವನು–ಮಗು ಬಾಣಂತಿ ಆರೋಗ್ಯವಾಗಿದ್ದಾರಲ್ಲಾ ಅಷ್ಟೇ ಸಾಕು" ಎಂದ.

ಜಾನಕಿ ಖಿನ್ನಳಾಗಿದ್ದುದನ್ನು ಕಂಡ ಮೈಲಾರಯ್ಯ,

"ಏಕೆ ಜಾನಕಿ ಹೀಗಿದ್ದೀ" ಎಂದು ಕೇಳಿದ.

"ಶಾರದನ ಮೇಲೆ ಎಲ್ಲ ಜವಾಬ್ದಾರಿ ಹೊರೆಸಿಬಿಟ್ಟೆನಲ್ಲಾ ಎಂದು ವ್ಯಸನ ವಾಯಿತು.–ನಾವು ಹತ್ತಿರದಲ್ಲೇ ಇದ್ದಿದ್ದರೆ ಚೆನ್ನಾಗಿತ್ತು."

"ಶಾರದನ ಧೈರ್ಯ ನಿಜವಾಗಿಯೂ ಮೆಚ್ಚತಕ್ಕದ್ದು–ಮಾವಿನ ಗಿಡವಲ್ಲಿ ಬೇವು ಬಿಡುವುದಿಲ್ಲ ಎನ್ನುವುದು ನಿಜ."

"ಒಂದೊಂದು ಸಲ ಬಿಡತ್ತೆ."

"ಯಾರ ವಿಷಯ ಯೋಚಿಸುತ್ತಿದ್ದೀ ?"

"ನಿಮ್ಮ ತಮ್ಮನ ವಿಷಯ."

"ಶಾಮನದು ಸ್ವಲ್ಪ ಕಿಲುಬು ಸ್ವಭಾವ–ಅಷ್ಟೇ ಹೊರತು ಬೇರೆ ಯಾವ ದುರ್ಗುಣವೂ ಅವನಲ್ಲಿಲ್ಲ."

"ಹೆಂಡತಿ ಮಕ್ಕಳಿಗೆ ಅನ್ನ ಹಾಕುವುದಕ್ಕೆ ಅಳುವುದು ದುರ್ಗುಣವೋ ಸದ್ಗುಣವೋ ?"

"ಈ ಸಾರೆ ಅವನು ಕೈಗೆ ಸಿಕ್ಕಲಿ–ಹಂಟರ್ ತೆಗೆದುಕೊಂಡು ನಾಲ್ಕು ಬಾರಿಸುತ್ತೇನೆ."

ಸದ್ಯ ಸುಮ್ಮನಿರಿ ದಮ್ಮಯ್ಯ–ಇದು ನಮಗೂ ನುಂಗಲಾಗದ ತುತ್ತು.

ಗಂಡ ಹೆಂಡತಿ ಮಾತಿಗೆ ನಾವು ಬಾಯಿ ಹಾಕುವುದು ಚೆನ್ನಾಗಿಲ್ಲ–ಬಾಯಿ ಹಾಕದಿದ್ದರೆ ಆ ಹುಡುಗಿ ಅನ್ನ ನೀರಿಲ್ಲದೆ ಕೊರಗುತ್ತದೆ. ನಾನೇ ನಯವಾಗಿ ಶಾಮಸಿಗೆ ಒಂದು ಮಾತು ಹೇಳಿ ನೋಡುತ್ತೇನೆ. ಅವನು ಅದಕ್ಕೂ ಬಾಗ ದಿದ್ದರೆ, ನೀವು ವಿಚಾರಿಸಿಕೊಳ್ಳುವಿರಂತೆ !"

"ನನ್ನ ಅದೃಷ್ಟ ನಕ್ಷತ್ರ ಉತ್ತರದಲ್ಲಿ ಹುಟ್ಟಿದೆಯೆಂದು ಕಾಣುತ್ತದೆ ಜಾನಕಿ."

"ಏಕೆ ?"

"ಬೆಂಗಳೂರು – ಸೋಲೂರು–ಶಿವಮೊಗ್ಗೆ–ಹು ಬ್ಬ ಳ್ಳಿ–ಇನ್ನು ಮೇಲೆ ಕಲ್ಬುರ್ಗಿ."

"ಮತ್ತೆ ಟ್ರಾನ್ಸ್‌ಫರೇ ?"

"ಕಲ್ಬುರ್ಗಿ ಡಿ. ಎಸ್. ಪಿ ಆಗಿ ನನ್ನ ಪೋಸ್ಟ್ ಮಾಡಿದ್ದಾರಂತೆ! ಸುಬ್ಬರಾಯಪ್ಪನವರು ರಿಟೈರ್ ಆದದ್ದರಿಂದ ನಮಗೆ–ಕೆಲವರಿಗೆ ಬಡ್ತಿ ಸಿಕ್ಕಿದೆ."

"ಇನ್ನು ಎಲ್ಲಿ ಹಾಕಿದರೂ ಪರವಾಗಿಲ್ಲ–ಜೋಳದ ಭಕ್ರಿ ಅಭ್ಯಾಸ ವಾಗಿದೆ"

ಎಂದು ಜಾನಕಿ ನಕ್ಕಳು.

"ಶಿವಮೊಗ್ಗೆ ಬಿಟ್ಟದ್ದೇ ಬಿಟ್ಟದ್ದು–ನನ್ನ ವೇದಾಂತ ಪಾಠ ಅಪೂರ್ಣ ವಾಯಿತು."

"ಕಲ್ಬುರ್ಗಿಯಲ್ಲಿ ಯಾರಾದರೂ ಪಂಡಿತರು ಸಿಕ್ಕಬಹುದು."

"ನರಹರಿಶಾಸ್ತ್ರಿಗಳ ಹಾಗೆ ಪಾಠ ಹೇಳುವ ಪಂಡಿತರನ್ನು ಎಲ್ಲಿ ತರೋಣ."

"ಹೋದ ಕಡೆಯಲ್ಲೆಲ್ಲಾ ಮೈಸೂರು ವೀಳೆಯದೆಲೆಯೇ ಬೇಕು ಎಂದರೆ ಸಿಕ್ಕುತ್ತದೆಯೇ–ಸಿಕ್ಕಿದುದರಲ್ಲಿಯೇ ನಾವು ತೃಪ್ತಿಪಟ್ಟುಕೊಳ್ಳಬೇಕು."

"ಅದೂ ಸರಿಯೆನ್ನು"

ಎಂದು ಮೈಲಾರಯ್ಯ ಹೆಂಡತಿಯ ಮಾತಿಗೆ ತಲೆದೂಗಿದ.

ಅದೇ ತಿಂಗಳು ಕೊನೆಗೆ ಮೈಲಾರಯ್ಯ ಕಲ್ಬುರ್ಗಿಗೆ ಹೋಗಿ ಚಾರ್ಜ್ ವಹಿಸಿಕೊಳ್ಳಬೇಕಾಯಿತು.

ಪೂಜಾ, ಪಾರಾಯಣಪ್ರಿಯನಾದ ಮೈ ಲಾ ರ ಯ್ಯ ನ ನ್ನು ನೋಡಿ ಪೋಲೀಸ್ ಖಾತೆಯವರು ಮುಸಿಮುಸಿ ನಗಲಾರಂಭಿಸಿದರು

ಮೈಲಾರಯ್ಯನ ಆಡಳಿತಕ್ರಮದ ಪರಿಚಯ ಅವರಿಗಾದ ಮೇಲೆ ನಗೆ ನಿಂತುಹೋಯಿತು.

ಒಮ್ಮೆ ಕಲ್ಬುರ್ಗಿಯಲ್ಲಿ 'ಕ್ಯಾಂಪ್' ಮಾಡಿದ್ದ ಡಿ. ಐ. ಜಿ ಥಾಂಸನ್ ಸಾಹೇಬರು, ಮೈಲಾರಯ್ಯನನ್ನು ಪ್ರವಾಸಿಗರ ಬಂಗಲೆಗೆ ಬರಮಾಡಿಕೊಂಡು, ಆಡಳಿತಕ್ಕೆ ಸಂಬಂಧಿಸಿದ ವಿಷಯಗಳನ್ನು ಚರ್ಚಿಸಿದ ಮೇಲೆ,

"ಸ್ವಲ್ಪ ಡ್ರಿಂಕ್ (Drink) ತೆಗೆದುಕೊಳ್ಳೋಣವೇ ?" ಎಂದರು.

ಹಿಂದೆ ಮುಂದೆ ನೋಡಿದ ಮೈಲಾರಯ್ಯ,

"ತಾವು ತೆಗೆದುಕೊಳ್ಳಿ ಸಾರ್-ನಾನು ಜತೆಯಲ್ಲಿ ಕುಳಿತಿರುತ್ತೇನೆ."

"ನೀವು ಡ್ರಿಂಕ್ಸ್ ತೆಗೆದುಕೊಳ್ಳುವುದಿಲ್ಲವೇ ?"

"ಬಹಳ ಹಿಂದೆ ತೆಗೆದುಕೊಳ್ಳುತ್ತಿದ್ದೆ-ಬಿಟ್ಟುಬಿಟ್ಟೆ"

ಸಾಹೇಬರ ಚಪ್ರಾಸಿ ಡ್ರಿಂಕ್ಸ್, ಗ್ಲಾಸ್, ಸೋಡಾ ತಂದಿಟ್ಟು, ಒಂದು ಗ್ಲಾಸ್ ಸಿದ್ಧಗೊಳಿಸಿದ.

"ಹಾಕು ಜಾನ್"

ಎಂದು ಸಾಹೇಬರು ಸೂಚನೆಯಿತ್ತರು.

ಜಾನ್, ಕೈಗಿತ್ತ ಗ್ಲಾಸನ್ನು ಬರಿದು ಮಾಡುತ್ತಾ ಸಾಹೇಬರು,

"ಡ್ರಿಂಕ್ಸ್ ತೆಗೆದುಕೊಳ್ಳುವುದನ್ನು ಏಕೆ ನಿಲ್ಲಿಸಿಬಿಟ್ಟಿರಿ ಮಿ. ಮೈಲಾರಯ್ಯ" ಎಂದು ಕೇಳಿದರು.

"ನಿಜ ಹೇಳಲೇ ಸಾರ್."

"ಹೇಳಿ-I appreciate Candour !"

"ನಮಗೆ ಬರುವ ಸಂಬಳದಲ್ಲಿ ಈ ಅಭ್ಯಾಸಗಳನ್ನಿಟ್ಟುಕೊಳ್ಳುವುದು ಸಾಧ್ಯವಿಲ್ಲ. ನಮ್ಮ ಚಟ ಪೂರೈಸುವುದಕ್ಕಾಗಿ ಕಂಪವರಿಗೆ ಕೈಯೊಡ್ಡಬೇಕಾಗುತ್ತದೆ.-ಇಲ್ಲದಿದ್ದರೆ ಲಂಚ ಹೊಡೆಯಬೇಕಾಗುತ್ತದೆ.-ಪಾಪ ಜಡೆಯಂತೆ ನಮ್ಮ ಸುತ್ತ ಹೆಣೆದುಕೊಳ್ಳುತ್ತದೆ. ಅದಕ್ಕೋಸ್ಕರ ಈ ಹವ್ಯಾಸವೇ ಬೇಡ ಎಂದು ಬಿಟ್ಟುಬಿಟ್ಟೆ."

ಮೈಲಾರಯ್ಯನ ಸ್ಪಷ್ಟೋಕ್ತಿಯನ್ನು ಮೆಚ್ಚಿಕೊಂಡ ಥಾಂಸನ್ ಸಾಹೇಬರು,

"You are a fine officer and a fine man, Mr. Mylaraiah."

"It is very kind of you to say so Sir."

"ಮೊನ್ನೆ ಆಫೀಸರ್ಸ್ ಮೀಟಿಂಗ್‌ನಲ್ಲಿ (Officers meeting) ಒಂದು ವಿಷಯ ಬಂದಿತ್ತು. ನಾನಿನ್ನೂ ನನ್ನ ಅಭಿಪ್ರಾಯ ತಿಳಿಸಿಲ್ಲ. ನಿಮ್ಮನ್ನು ಒಂದು ಮಾತು ಕೇಳಬೇಕಾಗಿದೆ."

" ಅಪ್ಪಣೆಯಾಗಲಿ."

" ಸ್ಟೇಟ್ಸ್‌ಗಳಿಂದ ಕೆಲವು ಆಫೀಸರುಗಳನ್ನು ಸೆಂಟ್ರಲ್ ಪೋಲೀಸ್ ಫೋರ್ಸ್‌ಗೆ (Central Police Force) ತೆಗೆದುಕೊಳ್ಳುತ್ತಾರಂತೆ. ಹೆಸರುಗಳನ್ನು ಸೂಚಿಸಲು ನಮಗೆ ಆರ್ಡರ್ ಬಂದಿದೆ–ನೀವು ಒಪ್ಪುವ ಹಾಗಿದ್ದರೆ ನಿಮ್ಮ ಹೆಸರನ್ನು ಸೂಚಿಸುತ್ತೇನೆ."

" ನನಗೆ ಈಗ ಏನೂ ಕಡಿಮೆಯಾಗಿಲ್ಲ ಸಾರ್."

" ನೀವು ಒಪ್ಪಿಕೊಳ್ಳಬೇಕೆಂದು ನನ್ನ ಅಪೇಕ್ಷೆ ಏನೆನ್ನುವಿರೋ ?– ನಾವು ಆರಿಸಿ ಕಳಿಸುವ ಆಫೀಸರ್ ಎಲ್ಲ ವಿಷಯಗಳಲ್ಲಿಯೂ ಸಮರ್ಥನಾಗಿ, ನೀತಿವಂತನಾಗಿರಬೇಕು. ಅಂಥಿಂಥವರನ್ನು ಕಳಿಸಿದರೆ ನಮ್ಮ ಡಿಪಾರ್ಟ್‌ಮೆಂಟಿಗೇ ಕೆಟ್ಟ ಹೆಸರು ಬರುತ್ತದೆ.–ಇದು ನಮಗೆ ಸಂಬಂಧಪಟ್ಟ ವಿಷಯ– ಇನ್ನು ನಿಮಗೆ ಇದರಿಂದ ಲಾಭವಿದೆ. ಒಳ್ಳೆಯ ಪೇಸ್ಕೇಲ್ ಸಿಕ್ಕುತ್ತದೆ, ನಿಮ್ಮ ಪ್ರಾಸ್‌ಪೆಕ್ಟ್ಸ್ (Prospects) ತುಂಬ ಸುಧಾರಿಸುತ್ತದೆ."

" ತಾವು ಹೋಗು ಅಂದರೆ ಹೋಗುವುದಕ್ಕೆ ನಾನು ಸಿದ್ಧವಾಗಿದ್ದೇನೆ ಸಾರ್. ಪೂರ್ತಿ ಶಕ್ತಿಮೀರಿ ಪ್ರಯತ್ನಿಸಿ, ತಮ್ಮ ನಂಬಿಕೆ ಉಳಿಸುತ್ತೇನೆಂದು ಭರವಸೆ ಕೊಡಬಲ್ಲೆ."

"Very good Mr. Mylaraiah. You have made me very happy"

ಎಂದು ಸಾಹೇಬರು ಹೇಳಿದರು.

## ೩೫

ಸುಭದ್ರಾ ಬಾಣಂತನ ಮುಗಿಸಿಕೊಂಡು ಊರಿಗೆ ಬರುವುದನ್ನೇ ಶಾಮು ಕಾಯುತ್ತಿದ್ದ.

ಅವಳು ಬಂದ ಎರಡು ವಾರಗಳ ಮೇಲೆ, ಅವಳನ್ನು ಒಂದು ದಿನ ಸೌಜನ್ಯದಿಂದ ಮಾತಾಡಿಸುತ್ತಾ,

" ನಾನು ಧಾರಾಳವಾಗಿ ಖರ್ಚು ಮಾಡುವುದಿಲ್ಲ. ಕಂಜೂಸ್ ಎಂದು ಭಾವಿಸಿರುವೆಯಲ್ಲವೇ ಸುಭದ್ರಾ."

" ಪುನಃ ಏತಕ್ಕೆ ಆ ವಿಷಯ ಪ್ರಸ್ತಾಪಿಸುವಿರಿ. ಮಾತಿಗೆ ಮಾತು ಬೆಳೆದು ವ್ಯಾಜ್ಯಕ್ಕೆ ಕಾರಣವಾಗುತ್ತದೆ."

" ವ್ಯಾಜ್ಯವೂ ಇಲ್ಲ ಏನೂ ಇಲ್ಲ. ನಾನು ಹೇಳುವುದನ್ನು ಕೇಳಿದರೆ ನೀನೇ ಸಂತೋಷಪಡುತ್ತೀ."

" ............... "

" ಮನೆ ಕೊಳ್ಳಲು ನಿರ್ಧರಿಸಿದ್ದೇನೆ."

" ಮನೆ....ಕೊಳ್ಳುವುದು.... !"

" ಶಂಕರಪುರದಲ್ಲಿ ನೋಡಿಕೊಂಡು ಬಂದಿದ್ದೇನೆ. ಅವನು ಹನ್ನೆರಡು ಸಾವಿರ ಕೇಳುತ್ತಿದ್ದಾನೆ. ಹನ್ನೊಂದಕ್ಕೆ ಕುದುರುವ ಹಾಗೆ ಕಾಣುತ್ತದೆ. ಮನೆ ಚಿಕ್ಕದಾಗಿದ್ದರೂ ಅಚ್ಚುಕಟ್ಟಾಗಿದೆ-ಕಾಂಪೌಂಡು ದೊಡ್ಡದಾಗಿದೆ."

" ಹನ್ನೊಂದು ಸಾವಿರ ಎಲ್ಲಿಂದ ತರುವುದು ?"

" ನನ್ನ ಹತ್ತಿರ ಐದು ಸಾವಿರ ಇದೆ. ಅಣ್ಣನಿಂದ ಮೂರು ಸಾವಿರ ತರಿಸಿಕೊಳ್ಳುತ್ತೇನೆ-"

" ಅಲ್ಲಿಗೂ ಮೂರು ಸಾವಿರ ಕಡಿಮೆ ಬೀಳುತ್ತದಲ್ಲಾ !"

" ನಿನ್ನ ತಮ್ಮನಿಗೆ ಬರೆದು ನೀನು ಮೂರು ಸಾವಿರ ತರಿಸಬೇಕು."

" ಅವನನ್ನು ಯಾವ ಬಾಯಲ್ಲಿ ಕೇಳಲಿ-ಈಗೀಗ ಅವನು ಚೇತರಿಸಿ

ಕೊಳ್ಳುತ್ತಿದ್ದಾನೆ. ನನ್ನ ಬಾಣಂತನಕ್ಕೆ ನಾವಿರಾರು ರೂಪಾಯಿ ಖರ್ಚು ಮಾಡಿದ್ದಾನೆ."

"ಯಾರ ಪುಣ್ಯಕ್ಕೆ ಖರ್ಚುಮಾಡಿದ."

"ಅವನಿಂದ ಉಪಕಾರ ಪಡೆದು ನಾವು ಸಣ್ಣ ಮಾತು ಆಡಬಾರದು"

"ಸಣ್ಣ ಮಾತೋ, ದೊಡ್ಡ ಮಾತೋ–ನನಗೆ ಹಣಬೇಕು. ಅದನ್ನು ತರಿಸಿಕೊಡುವುದು ನಿನ್ನ ಭಾರ. ಇವತ್ತೇ ಅಣ್ಣನಿಗೆ ನಾನು ಕಲ್ಬುರ್ಗಿಗೆ ಕಾಗದ ಬರೆದಿದ್ದೇನೆ–"

"ರಂಗಣ್ಣ ನಿಮಗೆ ಅಪರಿಚಿತನಲ್ಲವಲ್ಲ–ನೀವೇ ಬರೆದು ಕೇಳಿ."

"ನೀನು ಬರೆಯಲ್ಲ."

"ಖಂಡಿತ ಬರೆಯಲ್ಲ !"

"ಅದೂ ಆಗಲಿ–ನಾನೇ ಬರೆಯುತ್ತೇನೆ. ನಿನ್ನ ತಮ್ಮ ಹಣ ಕಳಿಸಿ ಕೊಡದಿದ್ದರೆ, ಮಕ್ಕಳನ್ನೂ ಕಟ್ಟಿಕೊಂಡು ನೀನು ನೋಲೂರಿಗೇ ಹೋಗ ಬೇಕಾಗುತ್ತದೆ."

"ಏನೇನು ಆಗಬೇಕೋ ಎಲ್ಲಾ ಆಗಲಿ"

ಎಂದು ನಿರ್ಧಾರದಿಂದ ನುಡಿದಳು.

ಶಾಮ ತನ್ನ ಭಾವಮೈದುನನಿಗೆ ಕಾಗದ ಬರೆದು ಮನೆ ಕೊಂಡುಕೊಳ್ಳು ವುದಕ್ಕೆ ಮೂರು ಸಾವಿರ ಹಣ ಕಳಿಸಲು ತಿಳಿಸಿದ.

ರಂಗಣ್ಣನಿಗೆ ಕಾಗದ ಬರೆಯುವುದಿಲ್ಲವೆಂದು ತಿಳಿಸಿದ್ದ ಸುಭದ್ರಾ ಪುನರಾಲೋಚಿಸಿ,

"ನಿನ್ನ ಕಷ್ಟಸುಖಗಳನ್ನರಿತೂ ಈ ಕಾಗದ ಬರೆಯುವುದಕ್ಕೆ ವ್ಯಥೆಯಾಗುತ್ತದೆ. ನಿನ್ನನ್ನು ಹಣ ಕೇಳಕೂಡದೆಂದು ಅವರಿಗೆ ತಿಳಿಸಿದೆ. ಅವರು ನನ್ನ ಮಾತು ಕೇಳಲಿಲ್ಲ. ನಿನ್ನಿಂದ ಹಣ ಬರದಿದ್ದರೆ ನನ್ನನ್ನೂ ಮಕ್ಕಳನ್ನೂ ನೋಲೂರಿಗೇ ಕಳಿಸಿಬಿಡುವುದಾಗಿ ತಿಳಿಸಿದ್ದಾರೆ.

ನೀನು ಹೆಚ್ಚು ತೊಂದರೆ ಪಟ್ಟುಕೊಳ್ಳಬೇಡ. ಎಷ್ಟು ಸಾಧ್ಯವೋ ಅಷ್ಟು ಕಳಿಸು.

ಚಿ. ಸೌ. ಶಾರದಾ ನಾಲ್ಕು ದಿನ ಪುರಸತ್ತು ಮಾಡಿಕೊಂಡು ಇಲ್ಲಿಗೆ ಬಂದು ನನ್ನೊಂದಿಗಿರಲಿ.

ಇಂತು ನಿನ್ನ ಸೋದರಿ–ಸುಭದ್ರಾ."

ಎರಡು ಕಾಗದಗಳೂ ಒಂದೇ ದಿನ ರಂಗಣ್ಣನ ಕೈಸೇರಿದವು.

ಅವುಗಳನ್ನೋದಿಕೊಂಡು, ಶಾರದೆಯ ಕೈಗಿತ್ತ.

ಶಾರದೆ ಅವುಗಳನ್ನೋದಿಕೊಂಡು ಸುದುಮಾತಾಡದೆ, ಹಿಂದಿರುಗಿಸಿದಳು.

"ಏನು ಮಾಡುವುದು ಶಾರದಾ ?"

"ಏನು ಹೇಳಬೇಕೋ ನನಗೆ ತಿಳಿಯದಾಗಿದೆ."

"ಮೂರು ಸಾವಿರ ಎಲ್ಲಿಂದ ತರಲಿ ?"

"ಸಾಲವಾದರೂ ಮಾಡಿ ಕಳಿಸಿಕೊಡಬೇಕು."

"ಸಾಲ ಮಾಡಿದರೆ ತೀರಿಸುವುದು ಹೇಗೆ ?"

"ನಾನೊಂದು ಕೆಲಸ ಮಾಡಲೇ ?"

"ಏನು ?"

"ನಮ್ಮಣ್ಣನಿಗೆ ಬರೆಯಲೇ !"

"ಹಣ ಕಳಿಸೆಂದೇ ?"

"ಹೂ–ನನಗೆ ಬೇಕು ಎಂದು ಬರೆಯುತ್ತೇನೆ."

"ಎಲ್ಲಿಯಾದರೂ ಉಂಟೇ ಶಾರದಾ. ಅವರು ನನ್ನು, ನಿನ್ನಂದು ಏನು ತಿಳಿದುಕೊಳ್ಳುತ್ತಾರೆ. ನನಗೊಂದು ಮಾರ್ಗ ಹೊಳೆಯುತ್ತಿದೆ–ನೀನು ಒಪ್ಪಿದರೆ ಹಾಗೆ ಮಾಡುತ್ತೇನೆ."

"ಹೇಳಿ."

"ಎರಡು ಎಕರೆ ಗದ್ದೆ ಮಾರಿಬಿಡುತ್ತೇನೆ.–ಎಕರೆಗೆ ಒಂದೂವರೆ, ಎರಡು ಸಾವಿರ ಬರುತ್ತದೆ."

"ಹಿರಿಯರು ಮಾಡಿಟ್ಟಿರುವ ಆಸ್ತಿಯನ್ನು ಪೋಲುಮಾಡುವುದೇ ?"

"ಸುಭದ್ರನಿಗಿಂತ ಆಸ್ತಿ ಹೆಚ್ಚೇ! ಅವಳು ಕಣ್ಣೀರು ಹಾಕುವುದನ್ನು ನಾನು ನೋಡಲಾರೆ. ಹೆಂಡತಿಯ ಉಪಕಾರವನ್ನು ಸ್ಮರಿಸಿಕೊಂಡಾದರೂ ಅವನು ಚೆನ್ನಾಗಿರುತ್ತಾನೇನೋ ನೋಡೋಣ."

"ನೋಡಿ–ಹೇಗೆ ಸೂಕ್ತವೋ ಹಾಗೆ ಮಾಡಿ."

"ಇನ್ನು ತಿಂಗಳೊಳಗಾಗಿ ಹಣ ಜತೆ ಮಾಡಿಕೊಡುತ್ತೇನೆ. ನೀನೇ ಬೆಂಗಳೂರಿಗೆ ಹೋಗಿ ಕೊಟ್ಟು ಬಾ. ಸುಭದ್ರೆಯನ್ನು ನೋಡಿದ ಹಾಗಾಯಿತು."

"ಹೋಗಿ ಬರುತ್ತೇನೆ"

ಎಂದು ಶಾರದಾ ಹೇಳಿದಳು.

## ೩೬

ಶಾಮನ ಕಾಗದ ಒಡೆದು ನೋಡಿಕೊಂಡ ವೆಂಕಲಾರಯ್ಯ,

" ಜಾನಕೀ " ಎಂದು ಕೂಗಿದ.

ಜಾನಕಮ್ಮ ಬಂದು ಎದುರಿಗೆ ನಿಲ್ಲಲು,

" ನಿನ್ನ ಪ್ರೇಮಪುತ್ರ ಕಾಗದ ಬರೆದಿದ್ದಾನೆ "

" ಸುಭದ್ರಾ, ಮಕ್ಕಳು ಚೆನ್ನಾಗಿದ್ದಾರಂತೆಯೇ ?"

" ಆ ಸುದ್ದಿಯೇ ಇಲ್ಲ."

" ಇನ್ನೇನು ಬರೆದಿದ್ದಾನೆ."

" ಮನೆ ಕೊಂಡುಕೊಳ್ಳುತ್ತಾನಂತೆ! ಮೂರು ಸಾವಿರ ಬೇಕಂತೆ!"

" ಮೂರು ಸಾವಿರಕ್ಕೆ ಎಂಥ ಮನೆ ಬರುತ್ತೆ."

" ಮನೆ ಒಟ್ಟು ಹನ್ನೊಂದೋ ಹನ್ನೆರಡೋ ಆಗುತ್ತದಂತೆ–ಅದಕ್ಕೆ ನನ್ನ ಕೋಟಾ (quota) ಮೂರು ಸಾವಿರ."

" ಏನು ಮಾಡುತ್ತೀರಿ ?"

" ನನ್ನಲ್ಲಿ ಹಣವಿಲ್ಲ ಎಂದು ಬರೆದುಬಿಡುತ್ತೇನೆ. ನಾವೆಲ್ಲಾ ಇವನ ಭಾಗಕ್ಕೆ ಹಣ ಹಿಂಡುವ ಆಕಳುಗಳು."

" ನೀವಂತೂ ಮನೆ ಕೊಳ್ಳಲಿಲ್ಲ–ಶಾಮುನಾದರೂ ಕೊಂಡುಕೊಳ್ಳಲಿ."

" ಸರಿ–ಅಷ್ಟು ಹಣ ನಾನು ಎಲ್ಲಿಂದ ತರಲಿ ?"

" ನಿಮ್ಮ ಹತ್ತಿರ ಎಷ್ಟಿದೆ ?"

" ಒಂದು, ಒಂದೂವರೆ ಸಾವಿರ ಇರಬಹುದು."

" ಉಳಿದದ್ದು ನಾನು ಕೊಡುತ್ತೇನೆ."

" ನಿನ್ನ ಹತ್ತಿರ ಎಲ್ಲಿಂದ ಬರಬೇಕು."

" ಇದೆ–ನಾನು ಕೊಡುತ್ತೇನೆ."

" ಮನೆ ಕೊಳ್ಳುವುದಕ್ಕೆ ಅವನಿಗೇನು ಅವಸರ ಹೇಳು–ಇನ್ನು ನಾಲ್ಕು ದಿವಸ ಬಿಟ್ಟು ಕೊಂಡರಾಗದೇ ?"

" ಶಾಮನಿಗೂ ಸುಭದ್ರನಿಗೂ ಹೇಗಿದೆ ನೀವು ಬಲ್ಲಿರಿ–ಮನೆ ಕೊಳ್ಳುವುದ ಕ್ಕಾಗದಿದ್ದರೆ ಅವನು ಅವಳನ್ನು ಹುರಿದು ಮುಕ್ಕಿಬಿಡುತ್ತಾನೆ."

" ಒಳ್ಳೆಯ ತಮ್ಮ ಗಂಟುಬಿದ್ದ "

ಎಂದು ಬೇಸರಪಟ್ಟುಕೊಂಡ ಮೈಲಾರಯ್ಯ,

" ನೀನು ಒಡವೆ ಮಾರಬೇಡ. ಹೇಗಾದರೂ ನಾನು ಹಣ ಜತೆ ಮಾಡುತ್ತೇನೆ "

ಎಂದು ಆಶ್ವಾಸನವಿತ್ತ.

ಹಣ ಸಕಾಲಕ್ಕೆ ಶಾಮನ ಕೈಸೇರಿತು.

ಶಾರದೆಯೇ ಬೆಂಗಳೂರಿಗೆ ಬಂದು ಸುಭದ್ರೆಯ ಕೈಗೆ ಹಣ ಕೊಟ್ಟು ಹೋದಳು.

ಮನೆಯ ಮಾಲಿಕನಿಗೆ ಹಣ ಪಾವತಿ ಮಾಡಿ, ಮನೆಯನ್ನು ಶಾಮ ಸ್ವಾಧೀನಪಡಿಸಿಕೊಂಡು, ಒಂದು ಒಳ್ಳೆಯ ದಿನ ನೋಡಿ ತನ್ನ ಸ್ವಂತ ಮನೆಗೆ ವಾಸಕ್ಕೆ ಹೋದ.

ಶಾಮನ ಮನೆ ಅನುಕೂಲವಾಗಿದ್ದುದಲ್ಲದೆ ಸ್ವಲ್ಪ ಖಾಲಿ ಸೈಟೂ (site) ಉಳಿದಿತ್ತು.

ಮನೆಯ ತರಕಾರಿ ಖರ್ಚು ಮಿಗಿಸಲು ನಿಶ್ಚಯಿಸಿದ ಶಾಮ ತರಕಾರಿ ತೋಟ ಬೆಳಸಲಾರಂಭಿಸಿದ.

ತರಕಾರಿ ತೋಟಕ್ಕೆ ಪ್ರತಿನಿತ್ಯ ಭಾವಿಯಿಂದ ನೀರು ಸೇದಿ ಹಾಕುವ ಕೆಲಸವೂ ಸುಭದ್ರನಿಗೆ ಗಂಟುಬಿತ್ತು. ಮನೂ ತಾಯಿಗೆ ನೆರವಾಗುತ್ತಿದ್ದಳು.

ಬದನೆಯಕಾಯಿ, ದಂಟಿನ ಸೊಪ್ಪು, ಮೆಂತ್ಯದ ಸೊಪ್ಪು, ಹುರುಳಿ ಕಾಯಿ ಗಿಡಗಳು ಮೊಳೆತವು.

ಒಂದು ದಿನ ಯಾರೋ ಮನೆಗೆ ಬಂದವರು, ಕದ ಹಾಕಿಕೊಂಡು ಹೋಗಲು ಮರೆತರು.

ಪುಂಡು ದನವೊಂದು ಒಳನುಗ್ಗಿ ಶಾಮನ ತೋಟವನ್ನು ಧ್ವಂಸಮಾಡಿ ಬಿಟ್ಟಿತು.

ಸಂಜೆ ಮನೆಗೆ ಬಂದ ಶಾಮ ತೋಟಕ್ಕೊದಗಿದ್ದ ಅವಸ್ಥೆ ಕಂಡು ರೋಷ ಕಷಾಯಿತನಾಗಿ ಹೆಂಡತಿಯನ್ನು ವಾಚಾಮಗೋಚರ ಬಯ್ಯಲಾರಂಭಿಸಿದ.

" ಯಾರೋ ಬಂದು ಬಾಗಿಲು ತೆಗೆದು ಹೋದರೆ ನಾನೇನುಮಾಡಲಿ–" ಎಂದಳು.

" ಮಣ್ಣು ತಿನ್ನುವ ಕೆಲಸಮಾಡಿ ಮತ್ತೆ ಎದುರು ವಾದಿಸುವೆಯಾ "

ಎಂದು ಶಾಮು ಹೆಂಡತಿಯನ್ನು ಬಡಿಯಲಾರಂಭಿಸಿದ.

ತಾಯಿಯನ್ನು ಬಿಡಿಸಿಕೊಳ್ಳಲು ಬಂದ ಮನುವಿಗೂ ಸಾಕಷ್ಟು ಏಟು ಗಳು ಬಿದ್ದವು.

ಮನು ಚೀರಲಾರಂಭಿಸಲು ಜಗನ್ನಾಥ, ವನಮಾಲಿ ಶ್ರುತಿಸೇರಿಸಿದರು.

ಬೇಸರಗೊಂಡ ಶಾಮು,

"ಇದೇನು ಹಾಳು ಮನೆಯೋ–ಶನಿಗಳು ಒಂದೇ ಸಮನೆ ಬಡಿದು ಕೊಳ್ಳುತ್ತವೆ"

ಎಂದು ಬಯ್ದುಕೊಂಡು ಹೊರಗೆ ಹೋದ.

ಅಳುತ್ತ ಕುಳಿತಿದ್ದ ತಾಯಿಯ ಬಳಿಗೆ ಬಂದ ಮನೂ,

"ಅಳಬೇಡಮ್ಮ–ಅಣ್ಣ ನಿನ್ನ ಎಷ್ಟು ಹೊಡೆದನಮ್ಮ" ಎಂದಳು.

ಸುಭದ್ರಾ ಮನುವನ್ನಪ್ಪಿಕೊಂಡು ಬಿಕ್ಕಿಬಿಕ್ಕಿ ಅಳುತ್ತಾ,

"ಈ ನಿರ್ಭಾಗ್ಯಳ ಹೊಟ್ಟೆಯಲ್ಲಿ ಏಕೆ ಹುಟ್ಟಿದಿರಿ–ದೇವರು ಕಣ್ಣು ಬಿಟ್ಟು ನೋಡಿ ನನಗೂ, ನನ್ನ ಮಕ್ಕಳಿಗೂ ಸಾವನ್ನಾದರೂ ಕರುಣಿಸಬಾರದೇ ?"

"ಹಾಗನ್ನಬೇಡಮ್ಮ–ಹಾಗನ್ನಬೇಡ."

"ಮನೂ–ಏನೇ ಆಗಲಿ–ನಿನಗೆ ನಾನು ಮದುವೆಮಾಡುವುದಿಲ್ಲ. ನಿಮ್ಮಣ್ಣ ಒಪ್ಪಲಿ ಒಪ್ಪದಿರಲಿ–ಚೆನ್ನಾಗಿ ಓದಿಸಿಬಿಡುತ್ತೇನೆ. ನಿನ್ನ ಅನ್ನ ನೀನು ಸಂಪಾದಿಸಿಕೊಳ್ಳುವಂತೆ.–ಎರಡು ಹೊತ್ತು ಅನ್ನ ಹಾಕುತ್ತೇವೆಂದು ಇವರು ನಮ್ಮನ್ನು ಇಷ್ಟು ಹಿಂಸೆ ಮಾಡಬೇಕೇ ? ನಾನು ದುಡಿದು, ಸಂಪಾದಿಸಿ ನಿಮ್ಮನ್ನು ಸಾಕುತ್ತೇನೆ–ಓದಿಸುತ್ತೇನೆ"

ಎಂದು ನಿರ್ಧಾರದಿಂದ ನುಡಿದಳು.

# ೩೭

ಒಂದು ದಿನ ಶಾಲೆ ಮುಗಿದಮೇಲೆ, ನಾಗಳಿಗೆ ಹೋಗದೆ ಶಾಮು ಮನೆಗೆ ಬಂದ.

ಸುಭದ್ರಾ ಕಾಣಲಿಲ್ಲ.

ಮನೂ ಮಕ್ಕಳನ್ನು ಆಡಿಸುತ್ತ ಕುಳಿತಿದ್ದಳು.

" ನಿಮ್ಮಮ್ಮ ಎಲ್ಲೇ " ಎಂದು ಕೇಳಿದ.

ತಂದೆಯನ್ನು ಕಂಡರೆ ಗಡಗಡ ನಡುಗುತ್ತಿದ್ದ ಮನೂ ತಡವರಿಸಿ, ತಡವರಿಸಿ,

" ಪಾಠಕ್ಕೆ ಹೋಗಿದ್ದಾಳೆ " ಎಂದಳು.

" ಪಾಠ ! ಯಾವ ಪಾಠ."

" ಸಮಾಜ.... "

" ಯಾವಾಗಿನಿಂದ ?"

" ಆವತ್ತಿಂದ."

" ನಂಗೇಕೆ ಹೇಳಲಿಲ್ಲ."

" ನನಗೆ ಗೊತ್ತಿಲ್ಲ."

" ಗೊತ್ತಿಲ್ಲ–ಏನ ಮುಂಡೇದೇ– ಮನೆಯಲ್ಲಿ ನೀವೆಲ್ಲರೂ ಒಂದು– ನಾನೊಬ್ಬನೇ ಒಂದು "

ಎಂದು ರೇಗಿ ಮನುವಿನ ಕಪಾಳಕ್ಕೆ ನಾಲ್ಕು ಏಟು ಬಿಗಿದ.

ಮನು ಗಟ್ಟಿಯಾಗಿ ಅಳಲಾರಂಭಿಸಿದಳು.

" ಮುಚ್ಚು ಬಾಯಿ– ಬಾಯಿ ಮುಚ್ಚದಿದ್ದರೆ ಕೊಂದುಬಿಡ್ತೀನಿ ನೋಡು " ಎಂದು ಬಡಬಡಿಸಿದ.

ದುಃಖ, ಭಯದಿಂದ ಮನು, ವಸನಮಾಲಿಯನ್ನು ಎದೆಗವಚಿಕೊಂಡು ಮೂಲೆಯಲ್ಲಿ ಅಳುತ್ತ ಕುಳಿತುಕೊಂಡಳು.

ಸುಭದ್ರಾ ಮನೆಗೆ ಬರಲು, ಹೌಹಾರಿ ಹೋದ ಮನೂ ತಾಯಿಯನ್ನಪ್ಪಿ ಕೊಂಡು,

“ಅಣ್ಣ ಬಂದಿದ್ದಾನಮ್ಮ–ಎಲ್ಲಿ ಎಂದು ಕೇಳಿದ–ಸಮಾಜಕ್ಕೆ ಹೋಗಿದ್ದಾಳೆ ಎಂದೆ–ಹಿಡಿದುಕೊಂಡು ಚೆನ್ನಾಗಿ ಹೊಡೆದ”

ಎಂದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

ಅವಳ ಧ್ವನಿ ಕೇಳಿ ಒಳಗೆ ಬಂದ ಶಾಮು, ಸುಭದ್ರ ಬಂದಿದ್ದುದನ್ನು ನೋಡಿ,

“ಮಹಾರಾಣಿಯವರು ಮನೆಗೆ ಬರಲು ಅನುಕೂಲವಾಯಿತೇನೋ ?”

ಎಂದು ತಿರಸ್ಕಾರದಿಂದ ನುಡಿದ

“ಮನುವನ್ನೇಕೆ ನೀವು ಹೊಡೆದದ್ದು ?”

“ನನ್ನಿಷ್ಟ–ಅದನ್ನು ಕೇಳುವುದಕ್ಕೆ ನೀನು ಯಾರು ?”

“ನಾನು ಮನುವಿನ ತಾಯಿ.”

“ನಾನು ಮನುವಿನ ತಂದೆ.”

“ತಂದೆ ! ಇದ್ದರೆ ನಿಮ್ಮಂಥ ತಂದೆಯೇ ಇರಬೇಕು”

“ನಿನ್ನ ಬೆನ್ನಿನ ಮೇಲೆ ಶನಿ ಕುಣಿಯುತ್ತಿದ್ದಾನೆಂದು ಕಾಣುತ್ತದೆ–ನಾಲಗೆ ಉದ್ದ ಮಾಡುತ್ತಿದ್ದೀ”

“ಇನ್ನೊಂದು ಸಲ ನೀವು ಮಕ್ಕಳ ಮೇಲೆ ಕೈಮಾಡಿ....”

“ಏನು ಮಾಡುತ್ತೀ ?”

“ಏನು ಮಾಡುತ್ತೇನೆಯೋ....”

ಅವಳ ನುಡಿದ ಧ್ವನಿ ಕೇಳಿ ಶಾಮು ಆವಾಕ್ಕಾದ. ಕೈತೀಟೆ ತೀರಿಸಿ ಕೊಳ್ಳಲು ಅವನಿಗೆ ಧೈರ್ಯವಿಲ್ಲವಾಯಿತು.

“ಯಾರನ್ನು ಕೇಳಿ ಸಮಾಜ ಸೇರಿದೆ.”

“ಯಾರನ್ನು ಕೇಳಬೇಕಾಗಿತ್ತು.”

“ನನ್ನನ್ನು.”

“ಏಕೆ ?”

“ಏಕೆ ? ಈ ಮನೆಗೆ ನಾನು ಯಜಮಾನ.”

“ನಿಮ್ಮ ಯಜಮಾನಿಕೆಯೆಲ್ಲಾ ಮಕ್ಕಳನ್ನು, ನನ್ನನ್ನು ಬಡಿಯುವುದರಲ್ಲಿ ಮುಗಿಯಿತು.”

“ನೀನು ತಲೆಯೆಲ್ಲಾ ಹರಟಿದರೆ ಒದ್ದು ಹೊರಗೆ ಹಾಕುತ್ತೇನೆ.”

“ಗೊಡ್ಡು ಬೆದರಿಕೆ ಹಾಕುವುದು ಬಿಟ್ಟುಬಿಡಿ.”

"ನನ್ನ ಮನೆಯಲ್ಲಿ ನನ್ನ ಅವಮಾನ ಮಾಡುವೆಯಾ ?"

"ನಿಮ್ಮ ಮನೆ !–ನನ್ನ ತಮ್ಮ ಕೊಟ್ಟಿರುವ ಮೂರು ಸಾವಿರ ರೂಪಾಯಿ ನಾನು ಒಡವೆ ಮಾರಿ ಕೊಟ್ಟಿರುವ ಸಾವಿರದ್ಬೈನೂರು ಇಲ್ಲಿಟ್ಟು ನನ್ನ ಮನೆ ಎಂದು ಹೇಳಿ."

"ಎಂದೋ ನೀನು ನನ್ನ ಕೈಯಲ್ಲಿ ಚೆನ್ನಾಗಿ ಒದೆ ತಿಂದು ಸಾಯುತ್ತೀ ನೋಡು."

"ಅಷ್ಟಾದರೂ ಉಪಕಾರ ಮಾಡಿ."

"ಇನ್ನು ಮೇಲೆ ನೀನು ಸಮಾಜಕ್ಕೆ ಹೋಗಕೂಡದು."

"ನಾನು ಹೋಗೇ ಹೋಗುತ್ತೇನೆ"

"ನಿಮ್ಮ ಸಮಾಜದ ಅಧ್ಯಕ್ಷರನ್ನು ಕಂಡು, ನಿನ್ನನ್ನು ಸೇರಿಸಕೂಡ ದೆಂದು ನಾನು ತಿಳಿಸುತ್ತೇನೆ."

"ತಿಳಿಸಿ–ಅವರಿಗೊಮ್ಮೆ ಮುಖ ತೋರಿಸಿ–ನಿಮ್ಮ ಗತಿಯೇನಾಗತ್ತೋ ತಿಳಿಯುತ್ತದೆ."

"ಅವರಿಗೆಲ್ಲಾ ನನ್ನ ಮೇಲೆ ಚಾಡಿ ಹೇಳಿದ್ದೀರಾ ?"

"ಚಾಡಿ ಹೇಳಿಲ್ಲ–ನಿಜಸ್ಥಿತಿ ಹೇಳಿದ್ದೇನೆ."

"ನಿಜಸ್ಥಿತಿ–ಧರ್ಮದೇವತೆ ನೀನು !"

"ಧರ್ಮದೇವತೆ ಯಾರು, ಯಾರಲ್ಲ ಎಂದು ಅರಿಯುವ ಸಾಮರ್ಥ್ಯ ನಿಮಗಿದೆಯೇ ?"

"ನಿನಗೆ ಗ್ರಹಚಾರ ಒಕ್ಕರಿಸಿದಂತಿದೆ–ಒದೆ ಬಿದ್ದಲ್ಲದೆ ನಿನ್ನ ಪಿತ್ಥ ಇಳಿಯುವುದಿಲ್ಲ"

"................"

"ಸಮಾಜಕ್ಕೇ ಹೋಗುತ್ತಾ ಇದ್ದೀಯೋ–ಇನ್ನೆಲ್ಲಿಗಾದರೂ ಹಾಳಾಗಿ ಹೋಗುತ್ತಿದ್ದೀಯೋ ?"

ಸುಭದ್ರೆಯ ದುಃಖದ ಕಟ್ಟೆ ಒಡೆಯಿತು.

ಅವಳು ಗಟ್ಟಿಯಾಗಿ ರೋಧಿಸುತ್ತಾ,

"ನನ್ನ ಮೇಲೆ ಕೆಟ್ಟ ಮಾತಾಡಿದರೆ ನಿಮ್ಮ ಬಾಯಲ್ಲಿ ಹುಳು ಸುರಿಯು ತ್ತದೆ. ನೀವು ಕೊಡುತ್ತಿರುವ ನರಕಯಾತನೆ ಅನುಭವಿಸುತ್ತಿದ್ದರೂ ಈ ಮಾತು ಆಡುವಿರಾ–ನೀವು ಮನುಷ್ಯರೇ–ವಿಶ್ವಾಸ, ಕರುಣೆ ಎಂದರೇನೆಂಬುದನ್ನಾದರೂ ಬಲ್ಲಿರಾ–ಥೂ–ನಿಮ್ಮ ಜನ್ಮಕ್ಕೆ...."

ಅಲ್ಲಿ ನಿಲ್ಲುವುದು ಸರಿಯಲ್ಲವೆಂದರಿತ ಶಾಮು, ಮೆಲ್ಲನೆ ಹೊರಗೆ ಜಾರಿದ.

# ೩೮

ಆರು ತಿಂಗಳು ಕಳೆಯುವಲ್ಲಿ ಥಾಂಪ್ಸನ್ ಸಾಹೇಬರು, ಕೇಂದ್ರ ಸರ್ಕಾರದ ಪೋಲೀಸ್ ಫೋರ್ಸಿಗೆ ಮೈಲಾರಯ್ಯನನ್ನು ಆಯ್ಕೆ ಮಾಡಿಸಿದ್ದರು.

ಮೈಲಾರಯ್ಯ ತಮ್ಮನಿಗೆ ಕಾಗದ ಬರೆದು ಆ ಸಂತೋಷದ ಸುದ್ದಿ ತಿಳಿಸಿ,

"ನೀನೂ, ಸುಭದ್ರಾ, ಮಕ್ಕಳು ಇಲ್ಲಿಗೆ ಬರಬೇಕೆಂದು ನನ್ನ ಅಪೇಕ್ಷೆಯಾಗಿದೆ. ನಾನು ಇನ್ನು ಒಂದು ತಿಂಗಳಲ್ಲಿ ಕಲ್ಬುರ್ಗಿ ಬಿಡುತ್ತೇನೆ. ನೀವು ಈಗಲೇ ಹೊರಟುಬಂದರೆ ನಾಲ್ಕು ದಿನ ಇದ್ದಂತಾಗುವುದಲ್ಲದೆ, ಕಲ್ಬುರ್ಗಿಯನ್ನು ನೋಡಿದಂತೆಯೂ ಆಗುತ್ತದೆ ಒಂದು ಕಾಲಕ್ಕೆ ಬಹಮನಿಯವರ ರಾಜಧಾನಿಯಾಗಿದ್ದ ಈ ಊರು ಪ್ರೇಕ್ಷಣೀಯ ಸ್ಥಳಗಳಲ್ಲಿ ಒಂದಾಗಿದೆ."

ಜಾನಕಮ್ಮನೂ ನಾಲ್ಕು ಪಂಕ್ತಿ ಬರೆದು, 'ಖಂಡಿತವಾಗಿ ಬನ್ನಿ' ಎಂದು ತಿಳಿಸಿದಳು.

ಕಲ್ಬುರ್ಗಿಗೆ ಹೋಗಿ ಬರಲು ಶಾಮು ನಿರ್ಧರಿಸಿದ.

ಮನೆಯಲ್ಲಿ ತನ್ನ ಉಪಭೋಗಕ್ಕೆ ಬೇಕಿಲ್ಲದ ರೂಮಿನ ಜತೆಗೆ ಒಂದು ಅಡಿಗೆಯ ಮನೆ, ಸ್ನಾನದ ಮನೆ ಸೇರಿಸಿ ಯಾರಿಗಾದರೂ ಕೊಟ್ಟರೆ ಇಪ್ಪತ್ತು, ಇಪ್ಪತ್ತೈದು ರೂಪಾಯಿ ಬಾಡಿಗೆ ಬರುತ್ತದೆ ಎಂದು ಯೋಚಿಸಿದ ಶಾಮು, ಹೆಂಡತಿಯೊಂದಿಗೆ ಕಲ್ಬುರ್ಗಿಗೆ ಹೋಗಿ, ಅಣ್ಣನಿಂದ ಮತ್ತೆ ಎರಡು, ಮೂರು ಸಾವಿರ ಗಿಟ್ಟಿಸಲು ಯೋಚಿಸಿದ

ಸುಭದ್ರೆಯನ್ನು ಒಪ್ಪಿಸಿ ಹೊರಡಿಸುವುದು ಹೇಗೆ ಎಂಬ ಚಿಂತೆ ಅವನ ಮನಸ್ಸನ್ನು ಕೊರೆಯಲಾರಂಭಿಸಿತು.

ವಿಳಂಬ ಮಾಡಲು ಅವಕಾಶವಿಲ್ಲ–ಒಂದು ತಿಂಗಳಲ್ಲಿ ಮೈಲಾರಯ್ಯ ಕಲ್ಬುರ್ಗಿ ಬಿಟ್ಟು ದಿಲ್ಲಿಗೆ ಹೋಗುವವನಿದ್ದ.

ಒಂದು ದಿನ ಶಾಲೆಗೆ ಹೊರಡಲನುವಾಗಿದ್ದ ಶಾಮು, ತಾಂಬೂಲ ತಂದು ಮುಂದಿಟ್ಟ ಸುಭದ್ರೆಯನ್ನು ನೋಡಿ,

" ಸ್ವಲ್ಪ ನಿಲ್ಲು " ಎಂದ.

" ಏನು ?"

" ಅಣ್ಣನಿಗೆ ಕೇಂದ್ರ ಸರ್ಕಾರದಲ್ಲಿ ದೊಡ್ಡ ಕೆಲಸವಾಗಿದೆ-ಮುಂದಿನ ತಿಂಗಳು ಅವನು ದಿಲ್ಲಿಗೆ ಹೊರಡುತ್ತಾನೆ."

" ಬಹಳ ಸಂತೋಷ."

" ಕಲ್ಬುರ್ಗಿ ಬಿಡುವ ಮುನ್ನ ನೀನೂ, ನಾನೂ, ಮಕ್ಕಳೂ ಬರಬೇಕೆಂದು, ಕಾಗದ ಬರೆದಿದ್ದಾನೆ. ನಾಳೆಯಿಂದ ರಜಾ ತೆಗೆದುಕೊಳ್ಳಬೇಕೆಂದು ಯೋಚಿಸಿದ್ದೇನೆ."

" ................"

" ಸುಮ್ಮನೆ ನಿಂತುಬಿಟ್ಟೆಯಲ್ಲಾ-ಏನಾದರೂ ಹೇಳು."

" ಏನು ಹೇಳಬೇಕು."

" ನೀನು ಬರುತ್ತೀಯೋ ಇಲ್ಲವೋ ?"

" ಇಲ್ಲ-ನಾನು ಮಕ್ಕಳು ಬರುವುದಿಲ್ಲ. ನೀವು ಹೋಗಿ ಬರಬಹುದು."

" ಅತ್ತಿಗೆಮ್ಮನನ್ನು ನೋಡಲು ಇಚ್ಛೆಯಿಲ್ಲವೇ ?"

" ಈ ಸ್ಥಿತಿಯಲ್ಲಿ ನಾನು ಯಾರನ್ನೂ ನೋಡುವುದಿಲ್ಲ."

" ನಿನ್ನ ಸ್ಥಿತಿ ಏನಾಗಿದೆ ?"

" ಚರ್ಚೆ-ಬೇಕಿಲ್ಲ."

" ನೀನು ಬಂದರೆ ನನಗೆ ಉಪಕಾರವಾಗುತ್ತದೆ."

" ನನ್ನಿಂದ ನಿಮಗೆ ಉಪಕಾರವೇ ?"

" ಮನೆಯನ್ನು ಸ್ವಲ್ಪ ವಿಸ್ತರಿಸಿ, ಒಂದು ಭಾಗ ಬಾಡಿಗೆಗೆ ಕೊಡಬೇಕೆಂದಿದ್ದೇನೆ. ಇದಕ್ಕೆ ಹಣ ಬೇಕು-ಅಣ್ಣನನ್ನು ಕೇಳಬೇಕೆಂದಿದ್ದೇನೆ-ನೀನು ಬಂದರೆ ನನ್ನ ಕೆಲಸ ಸುಸೂತ್ರವಾಗುತ್ತದೆ."

" ನೀವುಂಟು-ನಿಮ್ಮ ಮನೆಯುಂಟು-ನನಗೆ ಯಾವದೂ ಹೇಳಬೇಡಿ " ಎಂದು ಒಳಗೆ ಹೊರಟು ಹೋದಳು.

' ಒಳ್ಳೆಯ ಶನಿ ಗಂಟುಬಿತ್ತು '

ಎಂದು ಬೈದುಕೊಂಡು ಶಾಮು ಶಾಲಾಭಿಮುಖನಾದ.

ಕಲ್ಬುರ್ಗಿಗೆ ಹೋಗಲು ನಿಶ್ಚಯಿಸಿದ್ದ ಶಾಮು, ಏಕಾಂಗಿಯಾಗಿಯೇ ಪ್ರಯಾಣ ಬೆಳಸಬೇಕಾಯಿತು.

ಗಂಡ ಊರು ಬಿಟ್ಟು ಹೋದ ಕೂಡಲೆ ಸುಭದ್ರಾ, ಸೋಲೂರಿಗೆ ಕಾಗದ ಬರೆದು ರಂಗಣ್ಣನನ್ನು ಬರಮಾಡಿಕೊಂಡಳು.

ಅಕ್ಕನ ದುಃಖೋದ್ಗಾರಗಳನ್ನು ಕೇಳಿದ ರಂಗಣ್ಣ ವಿಷಣ್ಣವದನನಾಗಿ,

" ಈ ಸಮಸ್ಯೆ ಬಗೆಹರಿಸುವುದು ಹೇಗೆ ಸುಭದ್ರಾ ?"

" ಅವರು ಊರಿಗೆ ಬಂದ ಮೇಲೆ, ನೀನು ಬಂದು ಏನಾದರೊಂದು ಇತ್ಯರ್ಥ ಮಾಡಿಬಿಡು."

" ಗಂಡಹೆಂಡಿರ ಮಾತಿನಲ್ಲಿ ನಾವು ಬಾಯಿ ಹಾಕುವುದು ನ್ಯಾಯ ವಲ್ಲಮ್ಮ."

" ಇನ್ನು ನಾನು ಅವರ ಜತೆ ಬಾಳ್ವೆ ಮಾಡಲು ಸಾಧ್ಯವಿಲ್ಲ "

" ಬೇರೆ ಇರಬೇಕೆಂದಿದ್ದೀಯಾ ?"

" ಹೂ."

" ಶಾಮ ಒಪ್ಪುತ್ತಾನೆಯೇ ?"

" ಅವರು ಒಪ್ಪಿದರೆಷ್ಟು-ಬಿಟ್ಟರೆಷ್ಟು ?"

" ನಿನ್ನ ಸಂಸಾರ ನಡೆಯುವುದು ಹೇಗೆ ಸುಭದ್ರಾ-ಮೂರು ಮಕ್ಕಳನ್ನು ಕಟ್ಟಿಕೊಂಡು, ಒಬ್ಬಂಟಿಗಳು ನೀನೇನು ಮಾಡಬಲ್ಲೆ "

" ನಾಲ್ಕು ಮನೆ ಮುಸರೆ ತಿಕ್ಕಿ ನನ್ನ ಮಕ್ಕಳನ್ನು ಸಾಕುತ್ತೇನೆ-ಅವರ ಕೈಗೆ ಮಾತ್ರ ನನ್ನ ಮಕ್ಕಳನ್ನು ಹಾಕುವುದಿಲ್ಲ."

" ದುಡುಕಬಾರದು ಸುಭದ್ರಾ-ಸಮಾಧಾನ ತಂದುಕೋ. ಶಾಮುನೇ ದಾರಿಗೆ ಬರುತ್ತಾನೆ."

" ಅವರು ದಾರೀಗೆ ಬಂದರೂ ನನಗೆ ಅವರ ಸಹವಾಸ ಬೇಡಪ್ಪ.- ನಮ್ಮ ಸಮಾಜದ ಅಧ್ಯಕ್ಷರು ನನಗೆ ಕೆಲಸ ಮಾಡಿಸಿಕೊಡಲು ಒಪ್ಪಿಕೊಂಡಿದ್ದಾರೆ. ಐವತ್ತೋ ಅರವತ್ತೋ ಸಂಬಳ ಬರುತ್ತದೆ-ನಾನು ಬೇರೆ ಮನೆ ಮಾಡಿಕೊಂಡು ಹೋಗುತ್ತೇನೆ."

" ಜನ ನಮ್ಮನ್ನು ನೋಡಿ ನಗುತ್ತಾರೆ."

" ನಕ್ಕರೆ ನಗಲಿ-"

" ಈಗ ಶಾಮ ಹೇಗೂ ಕಲ್ಬುರ್ಗಿಗೆ ಹೋಗಿದ್ದಾನೆ. ಮೈಲಾರಯ್ಯ ನವರಿಗೂ, ಜಾನಕಮ್ಮನವರಿಗೂ ಕಾಗದ ಬರೆದು ಎಲ್ಲ ವಿಷಯ ತಿಳಿಸುವುದು ಯುಕ್ತವಲ್ಲವೇ ?"

" ಅವರು ಏನು ಮಾಡಲು ಸಾಧ್ಯ ರಂಗಣ್ಣ-ಮೈಲಾರಯ್ಯನವರು,

ಜಾನಕಮ್ಮ ಇವರ ಅಲ್ಪತನ, ಜೀನತನ ಹೋಗಲಾಡಿಸಲು ಸಾಧ್ಯವೇ? ಬೇವಿನ ಗಿಡದ ಪಾತಿಗೆ ಸಕ್ಕರೆ ನೀರು ಎರೆದರೂ, ಬೇವಿನಕಾಯಿಯೇ ಬಿಡುವುದು."

"ಇನ್ನೂ ಯೋಚಿಸಿ ನೋಡು ಸುಭದ್ರಾ–ದುಡುಕಬೇಡ"

ಎಂದು ರಂಗಣ್ಣ ಸೂಚಿಸಿದ

ಶಾಮು ಒಬ್ಬನೇ ಬಂದುದನ್ನು ಕಂಡು ಜಾನಕಮ್ಮ ಅಸಂತುಷ್ಟಳಾದಳು.

"ಮಕ್ಕಳಿಗೆ ಮೈಯಲ್ಲಿ ಚೆನ್ನಾಗಿರಲಿಲ್ಲ–ಸುಭದ್ರಾ ಹೊರಡಲಾಗಲಿಲ್ಲ"

ಎಂದು ಶಾಮು ಸುಳ್ಳು ಹೇಳಿದ.

ಒಂದು ವಾರ ಅಣ್ಣನ ಮನೆಯಲ್ಲಿ ಸುಖವಾಗಿ ಕಳೆದು, ಕಲ್ಬುರ್ಗಿಯ ನೋಟಗಳನ್ನು ಈಕ್ಷಿಸಿದ ಶಾಮು ಹೊರಡಲನುವಾಗಿ, ಮನೆ ವಿಸ್ತರಿಸುವ ವಿಷಯ ಅಣ್ಣನಿಗೆ ತಿಳಿಸಿದ.

"ಮೇಲಿಂದ ಮೇಲೆ ದುಡ್ಡು ಕೇಳಿದರೆ ನಾನು ಎಲ್ಲಿಂದ ತರಲಿ ಶಾಮು ಈಗ ನಾನು ಕಲ್ಬುರ್ಗಿ ಬಿಡಬೇಕು–ದಿಲ್ಲಿಗೆ ಹೋಗಿ ಡ್ಯೂಟಿ ಸೇರಬೇಕು. ನನಗೇ ಸಾವಿರಾರು ರೂಪಾಯಿ ಖರ್ಚಿದೆ –ಐದಾರು ತಿಂಗಳಾಗಲಿ ನೋಡೋಣ–ಸ್ವಲ್ಪ ಹಣ ಶೇಖರಿಸಿ ಕಳಿಸಿ ಕೊಡುತ್ತೇನೆ"

ಎಂದು ಮೈಲಾರಯ್ಯ ಹೇಳಲು ಅಸಂತುಷ್ಟನಾದ ಶಾಮು,

'ಸುಭದ್ರೆ ಕೈಕೊಟ್ಟಳು–ಅವಳು ಬಂದಿದ್ದರೆ ಹೇಗಾದರೂ ಅತ್ತಿಗೆಯನ್ನೊಪ್ಪಿಸಿ ಹಣ ದೊರಕಿಸುತ್ತಿದ್ದಳು'

ಎಂದುಕೊಂಡು, ಸುಭದ್ರೆಯ ಬಗ್ಗೆ ಮತ್ತಷ್ಟು ಕೋಪಾವಿಷ್ಟನಾದ.

## ೩೯

ಮನೆ ಬಿಟ್ಟು ಹೋಗಲು ನಿಶ್ಚಯಿಸಿದ್ದ ಸುಭದ್ರಾ, ಗಂಡ ಹಿಂದಿರುಗುವುದರೊಳಗಾಗಿ ಹನುಮಂತಪುರದಲ್ಲಿ ಹನ್ನೆರಡು ರೂಪಾಯಿ ಬಾಡಿಗೆಗೆ ಒಂದು ಸಣ್ಣ ಮನೆ ಗೊತ್ತು ಮಾಡಿದಳು

ಶಾಮು 'ದೂರ್ವಾಸಾವತಾರ' ತಾಳಿಯೇ ಊರಿಗೆ ಬಂದ.

ಸುಭದ್ರಾ ಅವನನ್ನು ಮಾತಾಡಿಸುವ ಗೋಜಿಗೇ ಹೋಗಲಿಲ್ಲ.

ಶಾಲೆಗೆ ಹೊರಡಲು ಸಿದ್ಧನಾದ ಶಾಮು, ಕೆರಳಿ,

"ನನ್ನ ಮಾತಾಡಿಸುವಷ್ಟು ನಿನಗೆ ತಾಳಿಕೆಯಿಲ್ಲವೇ ?" ಎಂದ.

"ವಿಷಯ ಇದ್ದರಲ್ಲವೇ ಮಾತಾಡುವುದು."

"ಇನ್ನು ಮುಂದೆಯೂ ನೀನು ಹೀಗೇ ಇರತಕ್ಕವಳು...."

"ಹೇಗೆ ?"

"ರಾಕ್ಷಸಿಯ ಹಾಗೆ !"

"ರಾಕ್ಷಸಾಂಶ ಯಾರಲ್ಲಿ ಇದೆಯೆನ್ನುವುದನ್ನು ನಿಧಾನವಾಗಿ ಆಲೋಚಿಸಿ."

"ನೀನು ಕಲ್ಬುರ್ಗಿಗೆ ಬರದಿದ್ದುದರಿಂದ ನನ್ನ ಕೆಲಸ ಕೆಟ್ಟು ಹಾಳಾಗಿ ಹೋಯಿತು."

"ನಿಮಗೆ ಸಹಾಯ ಮಾಡುತ್ತೇನೆಂದು ನಾನು ಹೇಳಿರಲಿಲ್ಲವಲ್ಲಾ."

"ನಾನು ಮನೆ ವಿಸ್ತರಿಸಿ, ನಾಲ್ಕು ಕಾಸು ಬಾಡಿಗೆ ಬರುವ ಹಾಗೆ ಮಾಡಿದರೆ ನಿನಗೇ ಒಳ್ಳೆಯದಲ್ಲವೇ ?"

ತಿರಸ್ಕಾರದಿಂದ ನಕ್ಕ ಸುಭದ್ರಾ,

"ನನಗೆ ಒಳ್ಳೆಯದು !–ನನ್ನ ಒಳ್ಳೆಯದನ್ನು ಯಾವಾಗಿನಿಂದ ಯೋಚಿಸಲಾರಂಭಿಸಿದ್ದೀರಿ ?"

"ನೀನು ಹೀಗಿರುವುದು ಸ್ವಲ್ಪವೂ ಚೆನ್ನಾಗಿಲ್ಲ ಸುಭದ್ರಾ."

"ನನ್ನ ನಡತೆಯಿಂದ ನಾನು ನಿಮ್ಮನ್ನು ಮೆಚ್ಚಿಸುವ ಕಾಲ ಹೋಯಿತು."

"ಇನ್ನು ಯಾರನ್ನು ಮೆಚ್ಚಿಸಬೇಕೆಂದಿದ್ದೀಯಾ ?"

" ಭಗವಂತನನ್ನು !"

" ಭಗವಂತನನ್ನು !!"

" ನಿಮ್ಮ ಕುಹಕ–ಕೊಂಕು ನಿಮ್ಮಲ್ಲಿಯೇ ಇರಲಿ !"

" ನಿನ್ನ ಮನಸ್ಸಿನಲ್ಲೇನಿದೆ–ಸ್ಪಷ್ಟವಾಗಿ ಹೇಳಿಬಿಡು "

" ನಿಮ್ಮ ಮನೆಯಲ್ಲಿ–ನಿಮ್ಮ ಜತೆಯಲ್ಲಿ ಇರುವುದಕ್ಕೆ ನನಗೆ ಸ್ವಲ್ಪವೂ ಇಷ್ಟವಿಲ್ಲ."

" ಇನ್ನೆಲ್ಲಿ ಇರಬೇಕೆಂದು ನಿನ್ನ ಇಷ್ಟ "

" ಅದನ್ನು ಕಟ್ಟಿಕೊಂಡು ನಿಮಗೇನಾಗಬೇಕು–ನಾನು ಎಲ್ಲಿಯಾದರೂ ಇರುತ್ತೇನೆ–ಏನಾದರೂ ಮಾಡುತ್ತೇನೆ."

ರೊಚ್ಚಿಗೆದ್ದ ಶಾಮ, ಸುಭದ್ರೆಗೆ ನಾಲ್ಕು ಏಟು ಬಿಗಿಯಲು, ಅವಳು ಕೆಳಗೆ ಕುಕ್ಕರಿಸಿದಳು.

ಅವಳ ಮುಖಭಾವ, ಉದ್ವೇಗದುಃಖರಹಿತವಾಗಿದ್ದುದನ್ನು ಕಂಡ ಶಾಮ, ಅವಳನ್ನು ಒದ್ದು,

" ಹಾಳಾಗಿ ಹೋಗು "

ಎಂದು ಶಪಿಸಿ ಹೊರಟು ಹೋದ.

ಸುಭದ್ರಾ ಕುಳಿತ ಸ್ಥಳ ಬಿಟ್ಟು ಮೇಲಕ್ಕೆ ಬಹಳ ಹೊತ್ತು ಏಳಲೇ ಇಲ್ಲ.

ಅಸ್ತವ್ಯಸ್ತನಾಗಿದ್ದ ಶಾಮ ನಿರ್ವಾಹವಿಲ್ಲದೆ ಶಾಲೆಯಲ್ಲಿ ಕಾಲ ಕಳೆದು ಸಂಜೆ ಮನೆಗೆ ಬಂದ.

ಮನೆಗೆ ಬೀಗ ಬಿದ್ದಿದುದನ್ನು ಕಂಡ ಶಾಮ, ಹೊರಗಿದ್ದ ಕಲ್ಲುಬೆಂಚಿನ ಮೇಲೆ ಕುಳಿತು ಕಾಲ ದೂಡಲಾರಂಭಿಸಿದ.

ಗಂಟೆ ಏಳಾಯಿತು,

ಎಂಟಾಯಿತು.

ಸುಭದ್ರಾ ಹಿಂದಿರುಗಲಿಲ್ಲ.

ರೋಷಕಷಾಯಿತನಾದ ಶಾಮ, ಒಂದು ಕಲ್ಲು ತೆಗೆದುಕೊಂಡು, ಬೀಗ ಮುರಿದು ಒಳಕ್ಕೆ ಪ್ರವೇಶಿಸಿದ.

ಸುಭದ್ರೆಯ ಬಟ್ಟೆಗಳು, ಮಕ್ಕಳ ಬಟ್ಟೆಗಳು ಕಾಣಬರದಿರಲು,

' ಹಾಳಾಗಿಯೇ ಹೋದಳೋ ಇವಳು.

' ಎಲ್ಲಿಗೆ ಹೋಗಿರಬಹುದು ?'

ಎಂದು ಯೋಚಿಸುತ್ತಾ ಕುಳಿತ.

ಒಂಭತ್ತಾಯಿತು.

ಹತ್ತಾಯಿತು.

ಸುಭದ್ರಾ ಹಿಂದಿರುಗಲಿಲ್ಲ.

'ಎಲ್ಲಿಗೆ ಹೋಗುತ್ತಾಳೆ—ಸೋಲೂರಿಗೆ ತಮ್ಮನ ಮನೆಗೆ ಹೋಗಿರಬೇಕು'

ಎಂದುಕೊಂಡು, ತಾನೇ ಬಡಿಸಿಕೊಂಡು ಊಟ ಮುಗಿಸಿ ಮಲಗಿದ.

ಬೆಳಗಾಯಿತು.

ರಾಮನ ಮನಸ್ಸಿಗೆ ಕಳವಳವಾಯಿತು.

ಶಾಲೆಗೆ ರಜಾ ಕಾಗದ ಬರೆದು ಕಳುಹಿಸಿ ಸೋಲೂರು ಬಸ್ ಹತ್ತಿದ.

ಇದ್ದಕ್ಕಿದ್ದಂತೆ ಬಂದಿಳಿದ ಶಾಮುನನ್ನು ನೋಡಿ ರಂಗಣ್ಣ ಶಾರದಾ ಭಯಗ್ರಸ್ತರಾದರು.

"ಸುಭದ್ರಾ ಬಂದಿದ್ದಾಳೆಯೇ ರಂಗಣ್ಣ."

"ಇಲ್ಲವಲ್ಲಾ !"

"ನಿನ್ನೆ ಮಧ್ಯಾಹ್ನ ನನಗೂ ಅವಳಿಗೂ ಜಗಳವಾಯಿತು—ನಾನು ಶಾಲೆಗೆ ಹೋದೆ. ಸಾಯಂಕಾಲ ನಾನು ಬರುವಲ್ಲಿ ಮನೆಗೆ ಬೀಗಬಿದ್ದಿತ್ತು. ಸ್ವಲ್ಪ ಹೊತ್ತು ಕಾದು ನೋಡಿದೆ—ಅವಳು ಬರಲಿಲ್ಲ—ಬೀಗ ಒಡೆದು ಒಳಕ್ಕೆ ಹೋದೆ. ಅವಳ ಬಟ್ಟೆ, ಮಕ್ಕಳ ಬಟ್ಟೆ ಕಣ್ಣಿಗೆ ಬೀಳಲಿಲ್ಲ—ಇಲ್ಲಿಗೆ ಬಂದಿರಬಹುದು ಎಂದುಕೊಂಡು ಬಂದೆ."

ಶಾರದಾ ಅಳಲುಪಕ್ರಮಿಸಿದಳು.

"ಇಷ್ಟಕ್ಕೆ ಅವಕಾಶ ಕೊಡಬಾರದಿತ್ತು ಶಾಮೂ."

"ನಾನೇನು ಮಾಡಿದೆ."

"ನೀನು ಮಾಡಿರುವುದೆಲ್ಲಾ ನನಗೆ ಗೊತ್ತಿದೆ—ನೀನು ಕಲ್ಬುರ್ಗಿಗೆ ಹೋಗಿದ್ದಾಗ ಸುಭದ್ರಾ ನನ್ನನ್ನು ಬರಮಾಡಿಕೊಂಡು ಎಲ್ಲಾ ತಿಳಿಸಿದಳು—ಮನೆ ಬಿಟ್ಟುಬಿಡುತ್ತೇನೆಂದಳು—ನಾನು ಬೇಡವೆಂದೆ—ಕೊನೆಗೂ ಆಗಬಾರದುದು ಆಗಿ ಹೋಯಿತು."

"ಈಗೇನು ಮಾಡುವುದು ರಂಗಣ್ಣ ?"

"ಏನು ಹೇಳುವುದಕ್ಕೂ ನನಗೆ ತೋರುತ್ತಿಲ್ಲ."

"ಬೆಂಗಳೂರಿಗೆ ನನ್ನ ಜತೆ ಬರುವೆಯಾ ?"

"ಏಕೆ ?"

"ಅವಳು ಎಲ್ಲಿದ್ದಾಳೋ ಹುಡುಕೋಣ."

"ಹುಡುಕಿ...."

"ಅವಳನ್ನು ಮನೆಗೆ ಕರೆದುಕೊಂಡು ಹೋಗೋಣ."

"ಅವಳು ಬರುವುದಕ್ಕೆ ಒಪ್ಪಬೇಕಲ್ಲ!"

"ಒಪ್ಪುವುದಿಲ್ಲವೇ? ನೀನು ಹೇಳಿದರೂ...."

"ಯಾರೇ ಹೇಳಿದರೂ ಅವಳು ಒಪ್ಪುವುದಿಲ್ಲ–ಅವಳು ರೋಸಿಹೋಗಿದ್ದಾಳೆ."

"ಅವಳಿಲ್ಲಿದ್ದಾಳೆ ಪತ್ತೆ ಮಾಡೋಣ ನಡೀ."

ಅರೆಮನಸ್ಸಿನಿಂದ ರಂಗಣ್ಣ ಅವನ ಜತೆ ಹೊರಡಲು ಒಪ್ಪಿಕೊಂಡ.

# ೪೦

ಬಸ್ಸಿನಿಂದಿಳಿದ ಶಾಮು, ಒಂದು ಗಾಡಿ ಗೊತ್ತುಮಾಡಿಕೊಂಡು ರಂಗಣ್ಣ ನೊಂದಿಗೆ ಮಹಿಳಾ ಸಮಾಜಕ್ಕೆ ಬಂದ.

ಸಮಾಜದ ಅಧ್ಯಕ್ಷೆಯರಾದ ಜಯಲಕ್ಷ್ಮಮ್ಮನವರಿಗೆ ಆಳು,

" ಇಬ್ಬರು ನಿಮ್ಮನ್ನು ನೋಡಬೇಕೂಂತ ಬಂದವ್ರವ್ವಾ "

ಎಂದು ತಿಳಿಸಲು ಅಧ್ಯಕ್ಷೆಯರು,

" ಒಳಗೆ ಬರಮಾಡವ್ವಾ " ಎಂದರು.

ಒಳಗೆ ಬಂದ ಅಪರಿಚಿತಸ್ಥರನ್ನು ನೋಡಿದ ಜಯಲಕ್ಷ್ಮಮ್ಮನವರು,

" ಏನು ಬೇಕಾಗಿತ್ತು ?"

ಎಂದು ಕೇಳಿದರು.

" ನಿಮ್ಮ ಸಮಾಜದಲ್ಲಿ ಕೆಲಸ ಮಾಡುತ್ತಿರುವ ಸುಭದ್ರಮ್ಮನವರನ್ನು ನೋಡಬೇಕಾಗಿತ್ತು."

" ನೀವು ಯಾರು ?"

" ನಾನು ಅವರ ತಮ್ಮ ರಂಗಣ್ಣ ; ಇವರು ಸುಭದ್ರಮ್ಮನವರ ಯಜಮಾನರು ಶಾಮರಾಯರು."

ಶಾಮುನನ್ನು ಅಪಾದಮಸ್ತಕ ದಿಟ್ಟಿಸಿ ನೋಡಿದ ಜಯಲಕ್ಷ್ಮಮ್ಮ,

" ನೀವೇನೋ ಸುಭದ್ರಮ್ಮನ ಯಜಮಾನರು !"

ಎಂದರು.

ಅವಾಕ್ಕಾದ ಶಾಮು ಕತ್ತು ತಗ್ಗಿಸಿದ.

" ನಿಮ್ಮ ವಿಷಯ ಕೇಳಿ ನನಗೆ ದುಃಖವಾಗಿದೆ–ಕೋಪವೂ ಬಂದಿದೆ ಶಾಮರಾವ್. ಸುಭದ್ರಮ್ಮ ದೇವತಾಸ್ತ್ರೀ–ಆಕೆಯ ಜತೆ ಅನ್ಯೋನ್ಯವಾಗಿ ಸಂಸಾರ ಮಾಡಲಾಗದಿದ್ದವರು ನೀವು ಎಂಥವರ್ರೀ."

" ನಾನು ಅವಳಿಗೆ ಯಾವ ಅನ್ಯಾಯವನ್ನೂ ಮಾಡಿಲ್ಲ ತಾಯಿ."

" ಸಾಕು ನೀವು ನಿನ್ನೇ ನನಗೆಲ್ಲಾ ಗೊತ್ತಿದೆ. ಹೋಗಲಿ–ನಿಮ್ಮ ವ್ಯವಹಾರ ಕಟ್ಟಿಕೊಂಡು ನನಗೇನಾಗಬೇಕು."

" ಅವಳ ಅಡ್ರೆಸ್ ಬೇಕಾಗಿತ್ತು ತಾಯಿ."

" ಏಕೆ ?"

" ............... "

" ನೀವು ಪುನಃ ಸುಭದ್ರಮ್ಮನನ್ನು ಹೊಡೆದು ಬಡಿದರೆ ನಾನು ನಿಮ್ಮನ್ನು ಪೋಲೀಸಿಗೆ ಹ್ಯಾಂಡೋವರ್ (handover) ಮಾಡಿಬಿಡುತ್ತೇನೆ."

" ಅಂತಹುದು ಸಂಭವಿಸದಂತೆ ನಾನು ನೋಡಿಕೊಳ್ಳುತ್ತೇನೆ ತಾಯಿ–ದಯೆಯಿಟ್ಟು ಅವಳ ಅಡ್ರೆಸ್ ಕೊಡಿ "

ಎಂದು ರಂಗಣ್ಣ ಪ್ರಾರ್ಥಿಸಿದ.

" ನಿಮ್ಮ ಮೇಲೆ ಭರವಸೆಯಿಟ್ಟುಕೊಂಡು ಅಡ್ರೆಸ್ ಕೊಡುತ್ತೇನೆ ರಂಗಣ್ಣನವರೇ–ಏನಾದರೂ ಹೆಚ್ಚು ಕಡಿಮೆಯಾದರೆ ನೀವು ನನಗೆ ಉತ್ತರ ಕೊಡಬೇಕಾಗುತ್ತದೆ."

" ಆಗಲಿ ತಾಯಿ "

ಎಂದು ರಂಗಣ್ಣ ಅಡ್ರೆಸ್ ತೆಗೆದುಕೊಂಡ.

ಇಬ್ಬರೂ ನೇರವಾಗಿ ' ಹನುಮಂತಪುರ 'ಕ್ಕೆ ಬಂದರು.

ಸುಭದ್ರೆಯ ಮನೆ ಪತ್ತೆ ಹಚ್ಚುವುದು ಕಷ್ಟವಾಗಲಿಲ್ಲ.

ಮೊದಲು ಒಳಗೆ ಬಂದ ತಮ್ಮನನ್ನು ನೋಡಿ,

" ಯಾವಾಗ ಬಂದೆ ರಂಗಣ್ಣ "

ಎಂದು ಸುಭದ್ರ ಕೇಳಿದಳು.

" ಸ್ವಲ್ಪ ಹೊತ್ತಾಯಿತಮ್ಮ."

" ನನ್ನ ಮನೆ ಹೇಗೆ ಗೊತ್ತಾಯಿತು."

" ಸಮಾಜಕ್ಕೆ ಹೋಗಿದ್ದೆ–ಜಯಲಕ್ಷ್ಮಮ್ಮನವರು ಅಡ್ರೆಸ್ ಕೊಟ್ಟರು.–ಶಾಮನೂ ಬಂದಿದ್ದಾನೆ!"

" ಅವರಿಗೆ ಇಲ್ಲಿ ಏನು ಕೆಲಸ ?"

" ಹಾಗೆನ್ನಬೇಡ ಸುಭದ್ರಾ. ಶಾಮನೊಂದಿಗೆ ಮಾತನಾಡು."

" ಅವರು ನಡೆಮುಡಿ ಹಾಸಿದರೂ ನಾನು ಪುನಃ ಅವರೊಂದಿಗೆ ಬಾಳ್ವೆ ಮಾಡುವುದಿಲ್ಲ ರಂಗಣ್ಣ."

" ಇರಲಿ "

ಎಂದು ರಂಗಣ್ಣ ಶಾಮನನ್ನು ಒಳಕ್ಕೆ ಕರೆದ.

ಶಾಮುನ ಮುಖ ಕಂಡೊಡನೆಯೇ ಮಕ್ಕಳು ಓಡಿಹೋಗಿ ಅಡಿಗೆ ಮನೆಯಲ್ಲಿ ಅವಿತುಕೊಂಡವು.

" ನೋಡಿದೆಯಾ ರಂಗಣ್ಣ "

ಎಂದು ಸುಭದ್ರಾ ಕೇಳಿದಳು.

" ಕೆಟ್ಟಕಾಲ-ಕೆಟ್ಟ ಘಳಿಗೆ ! ಕಳೆದದ್ದು ಹೋಗಲಿ-ಇನ್ನುಮೇಲೆ ಸರಿಯಾಗಿರುತ್ತಾನೆ- ನೀನು...."

" ನಾನೇನು ಮಾಡಬೇಕು "

" ಗಂಡನ ಮನೆಗೆ ಹಿಂದಿರುಗಬೇಕು "

" ಅದೊಂದು ಮಾತು ಹೇಳಬೇಡ.-ಈ ಮಕ್ಕಳಿಗಾಗಿಯಾದರೂ ನಾನು ಇನ್ನೂ ಕೆಲವು ದಿನ ಬದುಕಿರಬೇಕಾಗಿದೆ. ಇವರ ಕೈಯಲ್ಲಿ ಬಡಿಸಿಕೊಂಡು ಈಗಲೇ ಸಾಯಲು ಸಾಧ್ಯವಿಲ್ಲ."

" ಶಾಮುನಿಗೆ ಪಶ್ಚಾತ್ತಾಗವಾಗಿದೆ."

" ಇವರಿಗೆ ಪಶ್ಚಾತ್ತಾಪವೇ ?-ಮಕ್ಕಳ ಹೊಟ್ಟೆಗೆ ಹಾಕಲು ಅಳುವ ಈ ಕಲ್ಲೆದೆ ಮನುಷ್ಯನಿಗೆ ಪಶ್ಚಾತ್ತಾಪವೇ ?"

" ನಾನು ತಪ್ಪು ಮಾಡಿಲ್ಲ ಎಂದು ಹೇಳುತ್ತಿಲ್ಲ ಸುಭದ್ರಾ-ನೀನೂ ತಪ್ಪು ಮಾಡಿದ್ದೀ ?"

" ನಾನೇನು ತಪ್ಪು ಮಾಡಿದ್ದೇನೆ."

" ಪಂಚಾಯಿತಿ ಬೇಕಿಲ್ಲ-ನಿಮ್ಮ ಪಾಡಿಗೆ ನೀವು ಸುಖವಾಗಿರಿ. ಹೆಂಡತಿ, ಮಕ್ಕಳು ಬದುಕಿದ್ದಾರೆಂಬುದನ್ನೇ ಮರೆತುಬಿಡಿ. ನನ್ನ ತಲೆಯ ಮೇಲೆ ನೀವು ಕಿರೀಟ ಹೊರೆಸಿದರೂ ನಾನು ನಿಮ್ಮ ಜತೆ ಬಾಳ್ವೆ ಮಾಡುವುದಿಲ್ಲ."

" ಮಕ್ಕಳನ್ನೇನು ಮಾಡುತ್ತೀ ?"

" ಕುತ್ತಿಗೆ ಹಿಸುಕಿ ಭಾವಿಯಲ್ಲಿ ಹಾಕುತ್ತೇನೆ."

" ಮನೂ-ವನಮಾಲಿಯರಿಗೆ ಮದುವೆಯಾಗಬೇಕು...."

" ಅವರು ಬೀದಿ ಬಸವಿಯರಾದರೂ ಚಿಂತೆಯಿಲ್ಲ-ನಾನು ಮದುವೆ ಮಾಡುವುದಿಲ್ಲ."

" ಕೇಳಿದೆಯಾ ರಂಗಣ್ಣ."

ಆಗ್ರಹಗೊಂಡಿದ್ದ ರಂಗಣ್ಣ,

" ನನ್ನ ಮಾತು ಕೇಳುತ್ತೀಯೋ ಇಲ್ಲವೋ ಸುಭದ್ರಾ."

" ನಾನು ಯಾರ ಮಾತೂ ಕೇಳುವುದಿಲ್ಲ ರಂಗಣ್ಣ."

" ನಿನಗೆ ನಿನ್ನ ಹಟವೇ ಹೆಚ್ಚು."

" ಹೌದು."

" ತಮ್ಮನನ್ನೂ ದೂರ ಮಾಡಲು ನೀನು ಸಿದ್ಧವಾಗಿದ್ದೀ!"

" ಈ ಗಂಡ-ಯುವುಗಂಡನೊಂದಿಗೆ ಬಾಳು ಎಂದು ಹೇಳುವ ತಮ್ಮನೂ ನನಗೆ ಬೇಕಿಲ್ಲ."

" ಹಟ ಮಾಡಬೇಡ-ಈಗಲೂ ನನ್ನ ಮಾತು ಕೇಳು."

" ಯಾರ ಮಾತನ್ನೂ ನಾನು ಕೇಳುವುದಿಲ್ಲ ಎಂದು ಎಷ್ಟು ಸಲ ಹೇಳಲಿ."

ಕಿಡಿ ಕಾರುತ್ತ ಎದ್ದು ನಿಂತ ಶಾಮು.

" ಹೋಗಲಿ ಬಿಡು ರಂಗಣ್ಣ-ಇವಳನ್ನು ಕಟ್ಟಿಕೊಂಡು ನನಗೆ ಆಗ ಬೇಕಾದುದೇನು? ಅನಿಷ್ಟ....ಯಾರನ್ನು ಹೊಂದಿಸಿಕೊಂಡಿದ್ದಾಳೊ ಏನೋ?" ಎಂದ.

ಅರೆಗಾಯಗೊಂಡ ವ್ಯಾಘ್ರದಂತೆ ಮೇಲಕ್ಕೆದ್ದು ಶಾಮುನ ಕೋಟಿನ ಕಾಲರ್ ಹಿಡಿದುಕೊಂಡ ರಂಗಣ್ಣ,

" ಸುಭದ್ರೆಯ ಬಗ್ಗೆ ನೀನು ಕೆಟ್ಟ ಮಾತು ಆಡಿದರೆ, ನಿನ್ನ ಹಲ್ಲು ಉದು ರಿಸಿಬಿಡುತ್ತೇನೆ. ಅಯೋಗ್ಯ-ಅವಳನ್ನು ಪರದೇಶಿ ಮಾಡಿದ್ದಲ್ಲದೆ ಅವಳ ಮೇಲೆ ಇಲ್ಲಸಲ್ಲದ ಆರೋಪ ಹೊರಿಸುವೆಯಾ?"

ಅವನ ಕೈಯಿಂದ ಬಿಡಿಸಿಕೊಂಡ ಶಾಮು,

" ಇದರ ಫಲ ನೀವೆಲ್ಲಾ ಉಣ್ಣುವಿರಂತೆ!"

ಎಂದು ಹೇಳಿ ಅಲ್ಲಿಂದ ಹೊರಟು ಹೋದ.

ಕ್ಷಣಕಾಲ ರಂಗಣ್ಣ ಮೌನ ತಾಳಿ ನಿಂತ.

ಸುಭದ್ರೆಯೂ ನಿಂತಿದ್ದಳು.

" ಇನ್ನು ನಾನೂ ಹೊರಡುತ್ತೇನೆ ಸುಭದ್ರಾ."

" ರಂಗಣ್ಣಾ...."

" ನೀನೂ ಶಾಮು ಮತ್ತೆ ಒಂದಾಗಿ ಅನ್ಯೋನ್ಯವಾಗಿ ಬಾಳ್ವೆ ಮಾಡುವ ವರೆಗೆ ನಾನು ನಿಮ್ಮಿಬ್ಬರ ಮುಖಾವಲೋಕನ ಮಾಡುವುದಿಲ್ಲ"

ಎಂದು ಹೇಳಿದವನೇ ಹೊರಟುಬಿಟ್ಟ.

'ಅಯ್ಯೋ!' ಎಂದು ಚೀರಿ ಸುಭದ್ರಾ ದೊಪ್ಪನೆ ನೆಲದ ಮೇಲೆ ಬಿದ್ದು ಬಿಟ್ಟಳು.

---

# ಶಾರದಾ ಪ್ರಕಟನಾಲಯದ ಪ್ರಕಟನೆಗಳು

---

| | | |
|---|---|---|
| ಕಾರವಾನ್ (ದ್ವಿತೀಯ ಮುದ್ರಣ) | * | |
| ಸ್ವಾತಂತ್ರ್ಯದೆಡೆಗೆ (ದ್ವಿತೀಯ ಮುದ್ರಣ) | * | |
| ಜೀವನ-ಕಲೆ | * | |
| ಮುಗುಳುನಗೆ | * | |
| ಸ್ವಪ್ನಸುಂದರಿ (ದ್ವಿತೀಯ ಮುದ್ರಣ) | ೧ | ೨೫ |
| ಆಲದ ಹೂ | * | |
| ಹುಡುಗಾಟ | * | |
| ಶವದ ಮನೆ. | * | |
| ಎದಿರೇಟು | * | |
| ಸರ್ವಮಂಗಳಾ (ದ್ವಿತೀಯ ಮುದ್ರಣ) | ೩ | ೫೦ |
| ಕೇಡಿಗನ ಕಿಡಿಗಳು | * | |
| ದೇವತೆಗಳು ನಕ್ಕಾಗ | ೧ | ೨೫ |
| ಜ್ವಾಲಾಮುಖಿಯ ಮೇಲೆ (ದ್ವಿತೀಯ ಮುದ್ರಣ) | ೩ | ೮೦ |
| ನನ್ನ ರಸಿಕ ಮತ್ತು ಬಂಗಾರದ ಗೆಜ್ಜೆ | ೧ | ೫೦ |
| ಹಾಳು-ಮೂಳು | * | |
| ನಾಡಿಗೇರರ ನಗೆಬರಹಗಳು ೧ | * | |
| ಮೋಹದ ಬಲೆಯಲ್ಲಿ (ದ್ವಿತೀಯ ಮುದ್ರಣ) | ೩ | ೫೦ |
| ಸಾವಿನೊಂದಿಗೆ ಸರಸ | ೧ | ೨೫ |
| ಅನುರಾಗ | ೧ | ೨೫ |
| ಬಿಡುಗಡೆಯ ಬೇಡಿ (ದ್ವಿತೀಯ ಮುದ್ರಣ) | * | |
| ಜೋಳದ ಬೆಳೆಯ ನಡುವೆ (ದ್ವಿತೀಯ ಮುದ್ರಣ) | ೧ | ೮೦ |
| ಜಗತ್ತಾರಿ ಜಗದ್ಗುರು (ತೃತೀಯ ಮುದ್ರಣ)-ಉತ್ತಮ ಪ್ರತಿ | ೨ | ೭೫ |
| ಕಾನ್ಸೆಂಟ್ ಗರ್ಲ್ (ದ್ವಿತೀಯ ಮುದ್ರಣ) | ೦ | ೭೫ |
| ಖಾನಾವಳಿಯ ನೀಲಾ (ದ್ವಿತೀಯ ಮುದ್ರಣ) | ೧ | ೮೦ |
| ರಂಗನಾಯಕಿ | ೨ | ೦೦ |
| ಮದುವೆ ಮಾಡಿ ನೋಡು | * | |
| ಕಲ್ಯಾಣಿ (ದ್ವಿತೀಯ ಮುದ್ರಣ) | | |

---

ಗಳು ಮುಗಿದಿವೆ

| | | | |
|---|---|---|---|
| ೨೮. | ನೀ ನನ್ನ ಮುಟ್ಟಬೇಡ (ದ್ವಿತೀಯ ಮುದ್ರಣ) | ೧ | ೫೦ |
| ೨೯. | ನನ್ನ ದೇವರು 'ಕುವೆಂಪು'ರವರ (ಕಥಾಸಂಕಲನ) | ೧ | ೨೫ |
| ೩೦. | ಕಾಮಿನಿ–ಕಾಂಚನ (ದ್ವಿತೀಯ ಮುದ್ರಣ) | ೧ | ೫೦ |
| ೩೧. | ಜನಿವಾರ ಮತ್ತು ಶಿವದಾರ (ತೃತೀಯ ಮುದ್ರಣ) | ೧ | ೫೦ |
| ೩೨. | ಮಲ್ಲಿ | ೧ | ೫೦ |
| ೩೩. | ಆನಂದ ಲಹರಿ | * | |
| ೩೪. | ಸೀತಾ–ರತ್ನ | ೦ | ೭೫ |
| ೩೫. | ನಾಡಿಗೇರರ ನಗೆಬರಹಗಳು ೨ | ೧ | ೫೦ |
| ೩೬. | ನಾನು ಪೋಲೀಸನಾಗಿದ್ದೆ | ೧ | ೫೦ |
| ೩೭. | ರಾಗಿಣಿ | ೧ | ೫೦ |
| ೩೮. | ಮಧುಚಂದ್ರ | ೦ | ೭೫ |
| ೩೯. | ಬಂಗಾರದ ಜಿಂಕೆಯ ಹಿಂದೆ | ೧ | ೫೦ |
| ೪೦. | ಬಣ್ಣದ ಮಾಲಿಂಗ | ೧ | ೫೦ |
| ೪೧. | ಗೋವಾದೇವಿ | ೧ | ೫೦ |
| ೪೨. | ಪಟ್ಟಣದ ಹುಡುಗಿ (ನಾಟಕ) (ದ್ವಿತೀಯ ಮುದ್ರಣ) | ೧ | ೦೦ |
| ೪೩. | ಪಾಪಕೂಪ | ೧ | ೫೦ |
| ೪೪. | ಪಾತರಗಿತ್ತಿ | * | |
| ೪೫. | ರೂಪಸರ್ಪಿಣಿ | ೧ | ೫೦ |
| ೪೬. | ಕಾಂಚನ–ಗಂಗಾ | ೧ | ೫೦ |
| ೪೭. | ಪಾಂಚಜನ್ಯ | ೧ | ೨೫ |
| ೪೮. | ಬೆಳಗಿನ ಗಾಳಿ | ೧ | ೫೦ |
| ೪೯. | ಅಕ್ಕಮಹಾದೇವಿ (ನಾಟಕ) | ೧ | ೭೫ |
| ೫೦. | ಮಣ್ಣಿನ ಮಗಳು (ದ್ವಿತೀಯ ಮುದ್ರಣ) | ೨ | ೨೫ |
| ೫೧. | ರಾಘವಾಂಕನ ಹಲ್ಲು | ೧ | ೨೫ |
| ೫೨. | ದೇವದಾಸಿ ಮತ್ತು ಎಚ್ಚಮನಾಯಕ (ಚತುರ್ಥ ಮುದ್ರಣ) | ೧ | ೭೫ |
| ೫೩. | ಬೀದಿಯಲ್ಲಿ ಬಿದ್ದವಳು (ಎರಡನೆಯ ಮುದ್ರಣ) | ೧ | ೦೦ |
| ೫೪. | ಹೃದಯಾಂತರಾಳ (ನಾಟಕ) | ೧ | ೨೫ |
| ೫೫. | ಗಿರಿಯ ನವಿಲು (ದ್ವಿತೀಯ ಮುದ್ರಣ) | ೨ | ೫೦ |
| ೫೬. | ಹತ್ಯಾ–ನಾಟಕ | ೦ | ೭೫ |
| ೫೭. | ಮಾಯಾವತಿ | ೧ | ೫೦ |
| ೫೮. | ಆಗಸ್ಟ್ ಒಂಭತ್ತು | ೧ | ೦೦ |
| ೫೯. | ರೂಪಲೇಖಾ (ದ್ವಿತೀಯ ಮುದ್ರಣ) | ೩ | ೦೦ |
| ೬೦. | ಸಮರಭೂಮಿ | ೧ | ೫೦ |
| ೬೧. | ಜಗಜ್ಜ್ಯೋತಿ ಬಸವೇಶ್ವರ (ನಾಟಕ) (ದ್ವಿತೀಯ ಮುದ್ರಣ) | ೧ | ೭೫ |
| ೬೨. | ಅಮಾತ್ಯರತ್ನ | ೧ | ೫೦ |

| | | | |
|---|---|---|---|
| ೬೩. | ಚಿನ್ನಾ | ೧ | ೦೦ |
| ೬೪. | ಸುಂಟರಗಾಳಿ | ೧ | ೧೦ |
| ೬೫. | ಬೇಡದ ಮಗು (ದ್ವಿತೀಯ ಮುದ್ರಣ) | ೧ | ೦೦ |
| ೬೬. | ಭಾಗೀರಥಿ (ದ್ವಿತೀಯ ಮುದ್ರಣ) | ೧ | ೫೦ |
| ೬೭. | ಮಾಡಿ ಮಡಿದವರು (ತೃತೀಯ ಮುದ್ರಣ) | ೨ | ೫೦ |
| ೬೮. | ದಿವಾನ್ ಬಹದ್ದೂರ್ | ೧ | ೨೫ |
| ೬೯. | ರಂಗ ರೋಹಿಣಿ | ೧ | ೫೦ |
| ೭೦. | ವಾತ್ಸಲ್ಯ ಪಥ | ೨ | ೭೫ |
| ೭೧. | ಬೆಂಕಿಯ ಬಲೆ (ದ್ವಿತೀಯ ಮುದ್ರಣ) | ೧ | ೨೫ |
| ೭೨. | ತುಟಿ ಮೀರಿದುದು (ದ್ವಿತೀಯ ಮುದ್ರಣ) | ೧ | ೭೫ |
| ೭೩. | ಹಂಸಗೀತೆ (ಚತುರ್ಥ ಮುದ್ರಣ) | ೧ | ೭೫ |
| ೭೪. | ಜಲತರಂಗ | ೧ | ೫೦ |
| ೭೫. | ಶ್ರೀ ಕೃಷ್ಣ ಭೂಪಾಲ | ೧ | ೭೫ |
| ೭೬. | ಶಕಾರನ ಶಾರೋಟು (ನಾಟಕ) | ೨ | ೨೫ |
| ೭೭. | ಷಾಜಹಾನ್ (ನಾಟಕ) | ೧ | ೭೫ |
| ೭೮. | ಬಿಂಕದ ಸಿಂಗಾರಿ | ೧ | ೫೦ |
| ೭೯. | ಮೀನಿನ ಹೆಜ್ಜೆ | ೧ | ೦೦ |
| ೮೦. | ಸಾಕುಮಗಳು (ಎರಡನೆಯ ಮುದ್ರಣ) | ೧ | ೫೦ |
| ೮೧. | ಅನುರಕ್ತೆ (ಎರಡನೆಯ ಮುದ್ರಣ) | ೧ | ೫೦ |
| ೮೨. | ರೂಪದರ್ಶಿ (ಎರಡನೆಯ ಮುದ್ರಣ) | ೩ | ೭೦ |
| ೮೩. | ಕತ್ತರಿ ಪ್ರಯೋಗ | ೧ | ೩೫ |
| ೮೪. | ರಾಯ ಪರಾಭವ | ೧ | ೭೫ |
| ೮೫. | ಅನಾಥೆ (ದ್ವಿತೀಯ ಮುದ್ರಣ) | ೨ | ೨೫ |
| ೮೬. | ಉದಯರವಿ | ೩ | ೫೦ |
| ೮೭. | ಕಹಿ ಜೇನು | ೧ | ೫೦ |
| ೮೮. | ಮಧುರ ಸ್ವಪ್ನ | ೧ | ೫೦ |
| ೮೯. | ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ (ದ್ವಿತೀಯ ಮುದ್ರಣ) | ೨ | ೭೫ |
| ೯೦. | ಚಿನ್ನದ ಕಸ | ೧ | ೫೦ |
| ೯೧. | ಶ್ರೀ ಬಸವಣ್ಣನವರ ಅಮೃತವಾಣಿ (ದ್ವಿತೀಯ ಮುದ್ರಣ) | ೨ | ೦೦ |
| ೯೨. | ಭೂಮಿಗೀತ | ೧ | ೫೦ |
| ೯೩. | ರಣವಿಕ್ರಮ | ೧ | ೬೫ |
| ೯೪. | ನಿಂಬಿಯ ನಂಜು | ೧ | ೧೦ |
| ೯೫. | ಜೀವನದ ಜೊತೆಗಾತಿ | ೨ | ೫೦ |
| ೯೬. | ರಾಜ್ಯಪಾಲ | ೩ | ೨೫ |
| ೯೭. | ಈ ದಾರಿ – ಆ ದಾರಿ | ೧ | ೮೦ |